ಟಿ. ಆರ್. ನಾಗಪ್ಪ

# ಸಾಕ್ಷರತಾ ಸಾಹಿತ್ಯ ಸೂತ್ರಗಳು



ಪ್ರಚಾರ ಪುಸ್ತಕಮಾಲೆ – ೨೦೦
ಪ್ರಸಾರಾಂಗ
**ಮೈಸೂರು ವಿಶ್ವವಿದ್ಯಾನಿಲಯ**
ಮೈಸೂರು
೧೯೭೨

ಪ್ರಚಾರ ಪುಸ್ತಕ ಮಾಲೆ–೨೦೦

# ಸಾಕ್ಷರತಾ ಸಾಹಿತ್ಯ ಸೂತ್ರಗಳು

ಟಿ. ಆರ್. ನಾಗಪ್ಪ





ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೨

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಿರಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ

ಜನರಂತೆಯೇ ಇದ್ದುಕೊಂಡು ಗಳಿಸಿರುವ ಜ್ಞಾನವನ್ನು ಜನ ಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿ ಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯ ವನ್ನು ನೀಡಲು ನೆರವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದ ಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗು ತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟು ಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆ ಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನಮನೆ ಯಿಂದ ಹೊರಬಿದ್ದಕೂಡಲೇ ಜನರು ಆದರದಿಂದ ಕೊಂಡು ಓದು ತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ಗಣಿತ ವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ನೂರತೊಂಬತ್ತೊಂಬತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಟಿ. ಆರ್. ನಾಗಪ್ಪನವರ ಸಾಕ್ಷರತಾ ಸಾಹಿತ್ಯಸೂತ್ರಗಳು ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ದೇ. ಜವರೇಗೌಡ
ಕುಲಪತಿ

# ಕೃತಜ್ಞತೆ

ತಾ|| 20-3-72ರಂದು ಜೋಗ್‌ಫಾಲ್ಸ್‌ನಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಆಶ್ರಯದಲ್ಲಿ 'ಸಾಕ್ಷರತಾ ಸಾಹಿತ್ಯಸೂತ್ರಗಳು' ಎಂಬ ವಿಷಯವನ್ನು ಕುರಿತು ಮಾಡಿದ ಪ್ರಚಾರೋಪನ್ಯಾಸದ ಆಧಾರದ ಮೇಲೆ ಈ ಪುಸ್ತಕ ರಚಿತವಾಗಿದೆ.

ನಿರಕ್ಷರತಾ ನಿವಾರಣೆ ಇಂದಿನ ಬೃಹತ್‌ಸಮಸ್ಯೆ. ಅದು ಇಡೀ ವಿಶ್ವದ ಸಮಸ್ಯೆ; ಅದರಲ್ಲೂ ಅಭಿವೃದ್ಧಿಹೊಂದುತ್ತಿರುವ ದೇಶಗಳನ್ನು ಕಾಡುತ್ತಿರುವ ಸಮಸ್ಯೆ. ಭಾರತ ಅಭಿವೃದ್ಧಿಹೊಂದುತ್ತಿರುವ ದೇಶ. ಈ ದೇಶದ ಭಾರಿ ಪಿಡುಗಾದ ನಿರಕ್ಷರತಾ ನಿವಾರಣೆಗೆ ವಿದ್ಯಾವಂತರೆಲ್ಲರೂ ಪೂರ್ಣ ಮನಸ್ಸಿನಿಂದ ಯುದ್ಧದ ವೇಗದಲ್ಲಿ ಶ್ರಮಿಸಬೇಕಾದುದು ಅತ್ಯಗತ್ಯ.

ವಯಸ್ಕರಿಗೆ ಓದುಬರಹ ಕಲಿಸುವುದು ಕಷ್ಟಸಾಧ್ಯವಾದ ಕೆಲಸ. ಕಲಿತ ಸಾಕ್ಷರತೆಯನ್ನು ಉಳಿಸಿಕೊಳ್ಳಲು ಹೆಚ್ಚಿನ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಅದಕ್ಕಾಗಿ ಅವರಿಗಾಗಿಯೇ ಪ್ರತ್ಯೇಕವಾದ ಪೂರಕ ಸಾಹಿತ್ಯ ರಚಿಸಬೇಕು. ನವಸಾಕ್ಷರರಿಗೆ ಸೂಕ್ತ ಸಾಹಿತ್ಯ ರಚಿಸುವುದು ಒಂದು ಕಲೆ ಮತ್ತು ವಿಜ್ಞಾನವೂ ಹೌದು. ಈ ಶಾಸ್ತ್ರದ ಪರಿಚಯ ಮಾಡಿಕೊಡುವುದೇ ಈ ಪುಸ್ತಕದ ಉದ್ದೇಶ. ನವಸಾಕ್ಷರರಿಗಾಗಿ ನಡೆದ ಸಾಹಿತ್ಯ ರಚನಾಲಯಗಳ ನಿರ್ದೇಶಕನಾಗಿ ಪಡೆದ ಅನುಭವಗಳನ್ನು ಈ ಪುಸ್ತಕದಲ್ಲಿ ಸೇರಿಸಿದ್ದೇನೆ. 'ಅಳಿಲು ಭಕ್ತಿ ಮಳಲು ಸೇವೆ,

ಎಂಬಂತೆ ನನಗೆ ಗೊತ್ತಿರುವಮಟ್ಟಿಗೆ ವಿಷಯವನ್ನು ಓದುಗರ ಮುಂದಿಡಲು ಪ್ರಯತ್ನಪಟ್ಟಿದ್ದೇನೆ.

ನಿವೃತ್ತ ಯೂನೆಸ್ಕೊ ತಜ್ಞರಾದ ಶ್ರೀ. ಟಿ. ಕೃಷ್ಣಮೂರ್ತಿಗಳು ಪುಸ್ತಕದ ಕರಡನ್ನು ಓದಿಸಿ ಕೇಳಿದ್ದಾರೆ. ಶಾರದಾವಿಲಾಸ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ನನ್ನ ಸ್ನೇಹಿತ ಶ್ರೀ ಕೃಷ್ಣ ಅವರು ಕರಡುಪ್ರತಿಯನ್ನು ಓದಿ ಸೂಕ್ತಸಲಹೆಗಳನ್ನಿತ್ತಿದ್ದಾರೆ. ಅವರಿಬ್ಬರಿಗೂ ನನ್ನ ಕೃತಜ್ಞತೆಗಳು ಸಲ್ಲುವುವು.

ಈ ಪುಸ್ತಕವನ್ನು ಪ್ರಕಟಿಸಲು ಪ್ರಸಾರಾಂಗದ ನಿರ್ದೇಶಕರಾದ ಡಾ|| ಪ್ರಭುಶಂಕರ ಅವರು ಕಾರಣರು. ಅವರಿಗೆ ಮತ್ತು ಉಪ ನಿರ್ದೇಶಕರಾದ ಶ್ರೀ. ಆರ್. ಎಲ್. ಅನಂತರಾಮಯ್ಯನವರಿಗೆ ನಾನು ಚಿರಋಣಿ. ಈ ಹೊತ್ತಿಗೆಯನ್ನು ಅಲ್ಪಕಾಲದಲ್ಲಿ ಅಚ್ಚುಮಾಡಿಕೊಟ್ಟ ಶ್ವೇತಾದ್ರಿ ಮುದ್ರಣಾಲಯದವರಿಗೂ ಸಹ ನನ್ನ ಕೃತಜ್ಞತೆ ಸಲ್ಲುವುದು.

**ಟಿ. ಆರ್. ನಾಗಪ್ಪ**

# ವಿಷಯಾನುಕ್ರಮಣಿಕೆ

## ಸಾಕ್ಷರತೆಯ ಅವಶ್ಯಕತೆ

'ನಹಿಜ್ಞಾನೇನ ಸದೃಶಂ,' 'ಜ್ಞಾನಕ್ಕೆ ಸಮಾನವಾದದ್ದು ಯಾವುದೂ ಇಲ್ಲ.' ಜ್ಞಾನವೇ ಎಲ್ಲಕ್ಕಿಂತಲೂ ಮೇಲು. 'ವಿದ್ಯಾ ವಿಹೀನಃ ಪಶುಃ', ಎಂದರೆ 'ವಿದ್ಯೆಯಿಲ್ಲದವನು ಪಶುವಿಗೆ ಸಮಾನ' ಎಂದು ಹೇಳುವುದು ನಮ್ಮಲ್ಲಿ ರೂಢಿ. ವಿದ್ಯೆಗೆ ಎಷ್ಟು ಬೆಲೆ ಇದೆ ಎಂಬುದು ಇದರಿಂದ ವ್ಯಕ್ತವಾಗುವುದು. ಜ್ಞಾನ ಎಂದರೆ ತಿಳಿವಳಿಕೆ. ತಿಳಿವಳಿಕೆ ಪಡೆಯುವ ಕಾರ್ಯ ನಿರಂತರವಾಗಿ ಹುಟ್ಟಿನಿಂದ ಸಾವಿನವರೆವಿಗೂ ನಡೆಯುವುದು. ಜನತೆಗೆ ತಿಳಿವಳಿಕೆ ನೀಡುವ ಕಾರ್ಯ ಭಾರತದಲ್ಲಿ ಅನಾದಿಕಾಲದಿಂದಲೂ ನಡೆದುಬಂದಿದೆ. ಸಾಧು ಸಂತರು, ಜೋಗಿಗಳು, ಮತ್ತು ಇನ್ನಿತರರು ಜನರಲ್ಲಿ ಜ್ಞಾನಪ್ರಸಾರ ಮಾಡುತ್ತಿದ್ದರು. ಹಾಡು, ನಾಟಕ, ಬಯಲಾಟ, ಯಕ್ಷಗಾನ, ಸೂತ್ರದಬೊಂಬೆ ಮುಂತಾದ ಮನರಂಜನೀಯವಾದ ಪ್ರದರ್ಶನಗಳ ಮೂಲಕ ಜ್ಞಾನಪ್ರಸಾರ ಕಾರ್ಯ ನಡೆಯುತ್ತಿತ್ತು. ಹಿಂದಿನ ಮಟ್ಟದಲ್ಲಿ ಇಲ್ಲದಿದ್ದರೂ ಅವು ಈಗಲೂ ನಡೆಯುತ್ತಿವೆ. ದೇವಸ್ಥಾನಗಳು, ಧಾರ್ಮಿಕ ಸ್ಥಳಗಳು ಜ್ಞಾನಪ್ರಸಾರ ಕೇಂದ್ರಗಳಾಗಿದ್ದವು. ಆರ್ಯರ ಕಾಲದಲ್ಲಿ ವೇದ ಮತ್ತು ಉಪನಿಷತ್ತುಗಳನ್ನು ಜನರು ಬಾಯಿಪಾಠ ಮಾಡುತ್ತಿದ್ದರು. ಅಲ್ಲದೆ ವಂಶಪಾರಂಪರ್ಯವಾಗಿ ಅವು ಬಾಯಿಂದ ಬಾಯಿಗೆ ಸಾಗುತ್ತಿತ್ತು. ಒಟ್ಟಿನಲ್ಲಿ ಜ್ಞಾನ ಪ್ರಸಾರ ಬಾಯಿಯ ಮೂಲಕ ಹೆಚ್ಚಾಗಿ ನಡೆಯುತ್ತಿತ್ತು. ಆದರೆ ಇಂದಿಗೂ ವಯಸ್ಕರ ಶಿಕ್ಷಣ ಕಾರ್ಯ ನಡೆಯುತ್ತಿದೆ. ಪ್ರಪಂಚ ಹುಟ್ಟಿದಂದಿನಿಂದ ಲಯವಾಗುವವರೆಗೂ ವಯಸ್ಕರ

ಶಿಕ್ಷಣ ನಿರಂತರವಾಗಿ ನಡೆಯಬೇಕಾದ ಕಾರ್ಯ. ಸೂರ್ಯಚಂದ್ರರು ಇರುವವರೆಗೂ ವಯಸ್ಕರ ಶಿಕ್ಷಣ ಆಗಬೇಕಾದ ಕಾರ್ಯ. ಈ ಬಗ್ಗೆ ಭಿನ್ನಾಭಿಪ್ರಾಯಗಳಿಲ್ಲ.

ಅಯೋಧ್ಯೆಯಲ್ಲಿ ಒಬ್ಬ ನಿರಕ್ಷರ ಕುಕ್ಷಿಯನ್ನು ಹುಡುಕುವುದು ಕಷ್ಟವಾಗಿತ್ತು ಎಂಬ ಉಲ್ಲೇಖ ರಾಮಾಯಣದಲ್ಲಿ ಕಂಡು ಬರುವುದು. ಅಂದಿಗಿಂತ ಇಂದು ಅಕ್ಷರ ವಿದ್ಯೆಗೆ ಹೆಚ್ಚಿನ ಮಹತ್ವ ದೊರೆತಿದೆ. ಇದು ಅಚ್ಚಿನಯುಗ. ವಿಜ್ಞಾನಯುಗ. ಪ್ರಜಾ ಪ್ರಭುತ್ವ ಯುಗ. ಪ್ರಜಾಪ್ರಭುತ್ವದಲ್ಲಿ ಪ್ರಜೆಯೇ ಪ್ರಭು. ಅವನು ಅಜ್ಞಾನಿಯಾಗಿರಲಾರ. ಹಾಗಾದರೆ ಪ್ರಜಾಪ್ರಭುತ್ವ ಉಳಿಯ ಲಾರದು. ಭಾರತ ಅತಿ ದೊಡ್ಡ ಪ್ರಜಾಪ್ರಭುತ್ವವನ್ನು ಹೊಂದಿದ ರಾಷ್ಟ್ರ. ಭಾರತದಲ್ಲಿ 1.1.71ರ ಪ್ರಕಾರ 285.98 ಮಿಲಿಯನ್ ಮತದಾರರು ಇದ್ದಾರೆ. ಇಲ್ಲಿ ಇದುವರೆವಿಗೆ ನಡೆದ ಸಾರ್ವಜನಿಕ ಚುನಾವಣೆಗಳಲ್ಲಿ ಕುಲಗೆಟ್ಟ ಮತಗಳ ಸಂಖ್ಯೆ ಸಮಾಧಾನ ತಂದು ಕೊಡುವ ಅಂಶವಲ್ಲ. 1957ರಲ್ಲಿ ಕುಲಗೆಟ್ಟ ಮತಗಳ ಸಂಖ್ಯೆ ವೋಟು ಮಾಡಿದವರಲ್ಲಿ ಶೇಕಡ 2. ಇದು 1962ರಲ್ಲಿ ದ್ವಿಗುಣ ವಾಯಿತು. 1967ರಲ್ಲಿ ಶೇಕಡ 5ಕ್ಕೆ ಏರಿತು; ಅಂದರೆ 15 ಲಕ್ಷ ಮತಗಳು ಕುಲಗೆಟ್ಟವು. ಇತ್ತೀಚಿನ ಚುನಾವಣೆಗಳಲ್ಲಿ ಕುಲಗೆಟ್ಟ ಮತಗಳ ಸಂಖ್ಯೆ ಇನ್ನೂ ಹೊರಬಂದಿಲ್ಲ. ಎಷ್ಟೊಂದು ಮತಗಳ ಪೋಲು. ಈ ಅಂಶ ಶಿಕ್ಷಣದ ಅವಶ್ಯಕತೆಯನ್ನು ಹೇಳದಿರದು. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಶಿಕ್ಷಣಕ್ಕೆ ಆದ್ಯತೆ ದೊರೆತಿದೆ. ಶಾಲೆಯ ಮಕ್ಕಳಿಗೆ ನೀಡುವ ಶಿಕ್ಷಣ 5ರಿಂದ 20 ವರ್ಷಗಳ ನಂತರ ಪರಿಣಾಮ ನೀಡುವ ಶಿಕ್ಷಣ. ವಯಸ್ಕರಿಗೆ ನೀಡುವ ಶಿಕ್ಷಣ ಇಂದೇ ದೇಶದ ಮೇಲೆ ಪ್ರಭಾವ ಬೀರುವುದು

ಆದಕಾರಣ ವಯಸ್ಕರ ಶಿಕ್ಷಣಕ್ಕೆ ಆದ್ಯತೆ ನೀಡಬೇಕೆಂದು ಟಾನ್ಜೀನಿಯ ಗಣರಾಜ್ಯದ ಅಧ್ಯಕ್ಷರು 1964ರಲ್ಲಿ ಪಾರ್ಲಿಮೆಂಟಿನಲ್ಲಿ ಘೋಷಿಸಿದರು. ಥೈಲಾಂಡಿನಲ್ಲಿ 1940ರಲ್ಲಿ ಕಡ್ಡಾಯ ವಯಸ್ಕರ ಶಿಕ್ಷಣದ ಕಾನೂನು ಜಾರಿಗೆ ಬಂದಿತು.

ಏಷ್ಯ, ಲ್ಯಾಟಿನ್ ಅಮೆರಿಕ, ಆಫ್ರಿಕ ಮತ್ತು ಅರಬ್ ರಾಷ್ಟ್ರಗಳು ಅನಕ್ಷರಸ್ಥರ ತವರು. ಇವೆಲ್ಲಾ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು. ಇಲ್ಲಿ ವಯಸ್ಕರ ಶಿಕ್ಷಣ ಓದು ಬರಹ ಕಲಿಸುವ ಕಾರ್ಯದಿಂದ ಪ್ರಾರಂಭವಾಗುವುದು. 1970ರ ಲೆಕ್ಕಾಚಾರದ ಪ್ರಕಾರ ಇಡೀ ವಿಶ್ವದಲ್ಲಿ 810 ಮಿಲಿಯನ್ ಅನಕ್ಷರಸ್ಥ ವಯಸ್ಕರು ಇದ್ದಾರೆ. ಇವರೆಲ್ಲರೂ 15ರಿಂದ 45ವಯಸ್ಸಿನವರು. ಇವರ ಪೈಕಿ ಭಾರತದಲ್ಲಿ 150 ಮಿಲಿಯನ್ ನಿರಕ್ಷರ ಕುಕ್ಷಿಗಳು ಇದ್ದಾರೆ.

ಶಿಕ್ಷಣ ಎರಡು ಮುಖವಾಗಿ ನಡೆಯುತ್ತಿದೆ. ಒಂದು ಕಡ್ಡಾಯ ಪ್ರಾಥಮಿಕ ಶಿಕ್ಷಣ, ಇನ್ನೊಂದು ವಯಸ್ಕರ ಶಿಕ್ಷಣ. ಅದರ ಅಂಗವಾಗಿ ವಯಸ್ಕರಲ್ಲಿ ನಿರಕ್ಷರತಾ ನಿವಾರಣಾ ಕಾರ್ಯ ನಡೆಯುತ್ತಿದೆ. ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ 1976ರ ವೇಳೆಗೆ, ಶೇಕಡ 100 ಶಾಲೆಗೆ ಹೋಗುವ ವಯಸ್ಸಿನ ಮಕ್ಕಳು ಪ್ರಾಥಮಿಕ ಶಿಕ್ಷಣ ಶಾಲೆಗಳಿಗೆ ದಾಖಲಾಗುವರು. ಹಾಲಿ ದಾಖಲಾದ 100ಮಕ್ಕಳ ಪೈಕಿ ಪ್ರಾಥಮಿಕ ಶಾಲೆಯ 7ನೇಯ ತರಗತಿ ಮುಟ್ಟುವವರ ಪ್ರಮಾಣ ಶೇಕಡ 34ಮಂದಿ ಮಾತ್ರ. ಈಗ 6ರಿಂದ 11ವಯಸ್ಸಿನ ಮಕ್ಕಳು ಶಾಲೆಗಳಿಗೆ ಹೋಗುತ್ತಿರುವ ಪ್ರಮಾಣ ಶೇಕಡ 77.8 ಅಂದರೆ ಉಳಿಕೆ ಶೇಕಡ 22.2ಮಕ್ಕಳು ಶಾಲೆಗಳಿಗೆ ಸೇರದೆ ಉಳಿಯುವರು. ಜೊತೆಗೆ ಶಾಲೆಗೆ ಸೇರಿದ

ಮಕ್ಕಳಲ್ಲಿ ಪ್ರತಿ ವರ್ಷ 3.9 ಮಿಲಿಯನ್ ಮಕ್ಕಳು ಶಾಲೆಗೆ ಪೂರ್ಣಾವಧಿ ಹೋಗದೆ ಮಧ್ಯದಲ್ಲೇ ಬಿಡುತ್ತಿರುವರು. ಪ್ರಾಥಮಿಕ ಶಿಕ್ಷಣದಲ್ಲಿ ಎಷ್ಟೊಂದು ಪೋಲಾಗುತ್ತಿದೆ. ಕಾರಣ ಪೋಷಕರಿಗೆ ಮಕ್ಕಳ ಶಿಕ್ಷಣದ ಬಗ್ಗೆ ಸಾಕಷ್ಟು ತಿಳಿವಳಿಕೆ ಬೇಕಾಗಿದೆ.

ಭಾರತದಲ್ಲಿ ಜನಸಂಖ್ಯೆ ಏರಿದಂತೆ ಅನಕ್ಷರಸ್ಥರ ಪ್ರಮಾಣವೂ ಸಹ ಏರುತ್ತಿದೆ. 1951ರಲ್ಲಿ ಭಾರತದ ಜನಸಂಖ್ಯೆ 36.1 ಕೋಟಿ ಇತ್ತು. 1961ರಲ್ಲಿ 43.9ಕ್ಕೆ ಏರಿತು. 1970ರಲ್ಲಿ 52 ಕೋಟಿಗೆ ಏರಿದೆ. 1951ರಲ್ಲಿ ಅನಕ್ಷರಸ್ಥರ ಸಂಖ್ಯೆ 10.5 ಕೋಟಿ ಇದ್ದುದು, 1961ರಲ್ಲಿ 13.1 ಕೋಟಿಗೆ ಏರಿತು. 1970 ರಲ್ಲಿ I5ಕೋಟಿ ಆಯಿತು.

1951ರಿಂದ 1961ರ ಅವಧಿಯಲ್ಲಿ ಸಾಕ್ಷರಸ್ಥರ ಪ್ರಮಾಣ ಶೇಕಡ 7.4 ಏರಿತು. ಆದರೆ ಜನಸಂಖ್ಯೆ ಮೂರುಪಟ್ಟು ಎಂದರೆ ಶೇಕಡ 21.5 ಏರಿತು. 1951ಕ್ಕಿಂತ 1961ರಲ್ಲಿ 36 ಮಿಲಿಯನ್ ಅನಕ್ಷರಸ್ಥರು ಹೆಚ್ಚಾಗಿದ್ದರು. 1961ರಿಂದ 70ರ ಅವಧಿಯಲ್ಲಿ ಸಾಕ್ಷರಸ್ಥರ ಪ್ರಮಾಣ ಶೇಕಡ 5.35ಕ್ಕೆ ಇಳಿಯಿತು. ಆದರೆ 1950-51ರಲ್ಲಿ ಶಿಕ್ಷಣಕ್ಕೆ 1143 ಮಿಲಿಯನ್ ಹಣ ಖರ್ಚಾಯಿತು. ಆದರೆ 68–69ನೇ ಸಾಲಿನ ಲೆಕ್ಕಾಚಾರದ ಪ್ರಕಾರ ಶಿಕ್ಷಣದ ವೆಚ್ಚ 7 ಪಟ್ಟು ಏರಿತು. ಅಂದರೆ 8500 ಮಿಲಿಯನ್ ರೂಗಳಿಗೆ ಏರಿತು. ಶಿಕ್ಷಣಕ್ಕೆ ಹಣ ಹೆಚ್ಚು ವೆಚ್ಚವಾಯಿತೇ ಹೊರತು ಅಕ್ಷರಸ್ಥರ ಸಂಖ್ಯೆ ಮಾತ್ರ ಏರಲಿಲ್ಲ. ಇದಕ್ಕೆಲ್ಲಾ ಕಾರಣ ಜನಸಂಖ್ಯಾ ಸ್ಫೋಟನೆ. ಭಾರತದಲ್ಲಿ ವರ್ಷಕ್ಕೆ ಶೇಕಡ 2.7ರಂತೆ ಜನಸಂಖ್ಯೆ ಏರುತ್ತಿದೆ. ಈ ಜನಸಂಖ್ಯೆ ಹೆಚ್ಚಾಗಿ ಏರುತ್ತಿರುವುದು ಸಾಮಾನ್ಯವಾಗಿ ಹಳ್ಳಿಗಳಲ್ಲಿಯೇ ಭಾರತ ಹಳ್ಳಿ

ಗಳ ನಾಡು. ಭಾರತದಲ್ಲಿ 100 ಮಿಲಿಯನ್ ದಂಪತಿಗಳಿದ್ದಾರೆ. ಇವರ ಪೈಕಿ ಬಹಳ ಮಂದಿ ನಿರಕ್ಷರಕುಕ್ಷಿಗಳು, ಹಳ್ಳಿಗಾಡಿನವರು. ಮಕ್ಕಳು ದೇವರು ಕೊಟ್ಟ ವರ ಎಂದು ನಂಬಿದವರು. ಕುಟುಂಬ ಯೋಜನೆಯಲ್ಲಿ ನಂಬಿಕೆಯಿಲ್ಲದವರು;

ಭಾರತದಲ್ಲಿ ಬೇಸಾಯ ಅಭಿವೃದ್ಧಿಯಾಗುತ್ತಿದೆ. 1951 ರಿಂದ 15ವರ್ಷಗಳಲ್ಲಿ ಆಹಾರದ ಉತ್ಪನ್ನ ಏರಿದೆ. ಆದರೆ ಸರಾಸರಿ ದೊರಕುವ ಆಹಾರ 12.8 ಔನ್ಸಿನಿಂದ 12.4 ಔನ್ಸಿಗೆ ಇಳಿದಿದೆ. ಇದು ಭಾರತದ ಸ್ಪಷ್ಟ ಪರಿಸ್ಥಿತಿಯ ಚಿತ್ರಣ. ಇಂದು ಜ್ಞಾನಸ್ಫೋಟನೆಯಾಗುತ್ತಿದೆ. ಮಾನವ ಚಂದ್ರಲೋಕದಲ್ಲಿ ಇರಲು ಬಯಸಿದ್ದಾನೆ. ಸಂಜೆ ಕೇಳಿದ ರೇಡಿಯೋ ಸುದ್ದಿ ಮಾರನೇ ದಿನ ಬೆಳಿಗ್ಗೆ ಲಕ್ಷಾಂತರ ಪ್ರತಿಗಳಾಗಿ ಪತ್ರಿಕೆಗಳ ಮೂಲಕ ಪ್ರಚಾರವಾಗುತ್ತಿದೆ. ರೇಡಿಯೋ ಕೇಳಿದವರಿಗೆ ಪತ್ರಿಕಾ ಸುದ್ದಿಗಳಲ್ಲಿ ಅನೇಕವು ತಂಗಳು ಸುದ್ದಿಗಳು. ಆದ್ದರಿಂದ ಜ್ಞಾನ ಪ್ರಸಾರ ಮಿಂಚಿನ ವೇಗದಲ್ಲಿ ಆಗುತ್ತಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಶೇಕಡಾ 60 ಭಾಗ ಅಚ್ಚಾದ ಪ್ರಕಟಣೆಗಳ ಮೂಲಕ ಆಗುತ್ತಿದೆ. ಇಷ್ಟೊಂದು ಪ್ರಕಟಣೆಗಳನ್ನು ಓದುವವರು ಯಾರು ? ಓದು ಬರಹ ಬಾರದಿದ್ದರೆ?.

ಮೊದಲನೆ ಪಾಂಚವಾರ್ಷಿಕ ಯೋಜನೆಯಲ್ಲಿ 3500 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದೇವೆ. ಎರಡನೇ ಯೋಜನೆಯಲ್ಲಿ ಖರ್ಚು ಎರಡುಪಟ್ಟಾಗಿದೆ. ಮೂರನೆಯ ಯೋಜನೆಯಲ್ಲಿ 11 ಸಾವಿರ ಕೋಟಿ ರೂಪಾಯಿ ಖರ್ಚು ಆಗಿದೆ. ನಾಲ್ಕನೆಯ ಯೋಜನೆಯಲ್ಲಿ 22 ಸಾವಿರ ಕೋಟಿಗೆ ಕಡಿಮೆ ಇಲ್ಲದೆ ಹಣ ಖರ್ಚು ಆಗವುದು. ಆದರೆ ಜನತೆಯ ಮೇಲೆ ಆಗಿರುವ

ಪರಿಣಾಮ ಎಷ್ಟು? ಜನಕ್ಕೆ ಓದುಬರಹ ಬಂದಿದ್ದರೆ ಈ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅರಿತುಕೊಂಡು ಅವುಗಳಲ್ಲಿ ಇನ್ನೂ ಹೆಚ್ಚಾಗಿ ಅವರು ಪಾಲುಗೊಳಬಹುದಾಗಿತ್ತು.

ಮೀಕಾಂಗ್ ನದೀ ಕಣಿವೆ ಕ್ಷೇತ್ರದಲ್ಲಿ ಒಂದು ಪ್ರಯೋಗ ನಡೆಯಿತು. ಅಲ್ಲಿ ಓದುಬರಹ ಬಲ್ಲವರ ಸಂಖ್ಯೆ ಶೇಕಡ 53. ಅವರೆಲ್ಲರೂ 3ನೇ ತರಗತಿಯವರೆವಿಗೆ ಓದಿದವರು. ವ್ಯವಸಾಯ ವಿಸ್ತರಣಾಧಿಕಾರಿಗಳು ವ್ಯವಸಾಯಕ್ಕೆ ಸಂಬಂಧಪಟ್ಟ ಸಾಹಿತ್ಯವನ್ನು ಆ ಕ್ಷೇತ್ರದಲ್ಲಿ ಹಂಚಿದರು. ಆದರೆ ಓದಿದವರೆಷ್ಟು ಮಂದಿ? ಒಬ್ಬರೂ ಇಲ್ಲ. ವಿಸ್ತರಣಾಧಿಕಾರಿಗಳ ಮೂಲಕ ಜನತೆಯಲ್ಲಿ ಪ್ರಚಾರ ಮಾಡಿದರು. ಚಲನಚಿತ್ರಗಳನ್ನು ತೋರಿಸಿದರು. ಗೊತ್ತಾದ ಅವಧಿಯನಂತರ ಜನರನ್ನು ಪರೀಕ್ಷಿಸಲಾಯಿತು. ಸುಧಾರಿಸಿದ ಬೇಸಾಯದ 10 ಹಂತಗಳಲ್ಲಿ ಮೂರು ಹೆಚ್ಚೆಂದರೆ ನಾಲ್ಕು ಹಂತಗಳನ್ನು ಮಾತ್ರ ಜ್ಞಾಪಕದಲ್ಲಿ ಇಟ್ಟುಕೊಂಡಿದ್ದವರೇ ಹೆಚ್ಚು. ಹಾಗೂ ಈ ಹಂತಗಳನ್ನು ಕ್ರಮವರಿತು ತಿಳಿದಿರಲಿಲ್ಲ. ಆದರೆ ಇಂತಹ ಸಂದರ್ಭಗಳಲ್ಲಿ ಮನನಮಾಡಿಕೊಳ್ಳಲು ಸಹಾಯ ಮಾಡುವುದು ಅಚ್ಚಾದ ಪ್ರಕಟಣೆಗಳು ತಾನೇ? ಜನತೆಗೆ ಓದುಬರಹ ಬಾರದಿದ್ದರೆ ಅವುಗಳನ್ನು ಓದುವುದು ಹೇಗೆ?

ಸಾಕ್ಷರತೆಗೂ ಮತ್ತು ಪ್ರಗತಿಗೂ ಸಂಬಂಧವಿದೆ. ಟರ್ಕಿಯಲ್ಲಿ ಓದು ಬರಹ ಬಲ್ಲ ರೈತರು ಪ್ರಗತಿಪರರು. ಅವರು ಆಧುನಿಕ ವೈಜ್ಞಾನಿಕ ಪದ್ಧತಿಗಳನ್ನು ವ್ಯವಸಾಯದಲ್ಲಿ ಅಳವಡಿಸಿಕೊಂಡಿರುವರು. ಈ ಅಂಶವನ್ನು ಥೈಲಾಂಡು ಮತ್ತು ಪಾಕಿಸ್ತಾನದಲ್ಲಿ ನಡೆದ ಅಧ್ಯಯನಗಳು ಪುಷ್ಟೀಕರಿಸಿವೆ. ಗ್ವಾಟೆಮಾಲಾದ ಒಂದು

ಹತ್ತಿ ಕಾರ್ಖಾನೆಯಲ್ಲಿ ಸಾಕ್ಷರತಾ ತರಗತಿಗಳ ಮೂಲಕ ಕಾರ್ಮಿಕರಿಗೆ ಓದು ಬರಹ ಹೇಳಿಕೊಟ್ಟರು. ಆದ್ದರಿಂದ ಕಾರ್ಖಾನೆಯಲ್ಲಿ ಉತ್ಪನ್ನ ಹೆಚ್ಚಿತು. ಪರಿಣಾಮವಾಗಿ ಕಾರ್ಮಿಕರಿಗೆ ಹೆಚ್ಚು ವೇತನ ದೊರಕಿತು. ಅಲ್ಲೇ ಐದು ಹಳ್ಳಿಗಳಲ್ಲಿ ಇನ್ನೊಂದು ಅಧ್ಯಯನ ನಡೆಯಿತು. ಅದರ ಪ್ರಕಾರ ಓದು ಬರಹ ಕಲಿತ ಹೆಂಗಸರು ಆಹಾರ ಪದಾರ್ಥಗಳ ಬಳಕೆಯ ಬಗ್ಗೆ, ಔಷದೋಪಚಾರಗಳ ಬಗ್ಗೆ, ಅನಕ್ಷರಸ್ಥ ಹೆಂಗಸರಿಗಿಂತ ಹೆಚ್ಚಾಗಿ ತಿಳಿದಿದ್ದರು ಎಂಬುದಾಗಿ ತಿಳಿಯಿತು. 1924ರಲ್ಲಿ ಸೋವಿಯಟ್ ರಷ್ಯದಲ್ಲಿ ಒಂದು ಅಧ್ಯಯನ ನಡೆಯಿತು. ಕೇವಲ ಒಂದು ವರ್ಷದ ಪ್ರಾಥಮಿಕ ವಿದ್ಯಾಭ್ಯಾಸ ಪಡೆದಿರುವ ಕಾರ್ಮಿಕರ ಉತ್ಪನ್ನ ಸರಾಸರಿ ಶೇಕಡ 30 ಏರಿತ್ತು. ಆದರೆ ಕಾರ್ಖಾನೆಯ ಕಾರ್ಮಿಕನು ಅಷ್ಟೇ ಅವಧಿ ತರಪೇತನ್ನು ಕಾರ್ಖಾನೆಯಲ್ಲಿ ಪಡೆದನು. ತತ್ಪರಿಣಾಮವಾಗಿ ಅವನ ಉತ್ಪನ್ನ ಶೇಕಡ 12ರಿಂದ 16ಕ್ಕೆ ಏರಿತು. ಆದ್ದರಿಂದ ಪ್ರಾಥಮಿಕ ಶಾಲೆಯ ಒಂದು ವರ್ಷದ ಶಿಕ್ಷಣ ಪಡೆದ ಕಾರ್ಮಿಕರ ಸರಾಸರಿ ಉತ್ಪನ್ನ 2·6 ಪಟ್ಟು ಹೆಚ್ಚಿತು. ಎಂಬುದಾಗಿ ತಿಳಿಯಿತು. ಓದು ಬರಹ ಕಲಿತ ಕಾರ್ಮಿಕರು ತಮ್ಮ ಹಕ್ಕು ಬಾಧ್ಯತೆಗಳನ್ನು ಚೆನ್ನಾಗಿ ರಕ್ಷಿಸಿಕೊಳ್ಳುವರು. ಅಲ್ಲದೆ ಅನಕ್ಷರಸ್ಥ ಕಾರ್ಮಿಕರಿಗಿಂತಲೂ ಚೆನ್ನಾಗಿ ಕೆಲಸ ಕಾರ್ಯಗಳಲ್ಲಿ ಸಹಕರಿಸುವರು ಎಂಬ ಅಂಶ ಬೊಂಬಾಯಿ ಕಾರ್ಖಾನೆಗಳ ಕಾರ್ಮಿಕರ ಬಗ್ಗೆ ನಡೆದ ಸಂಶೋಧನೆಯಿಂದ ವ್ಯಕ್ತವಾಯಿತು. ಆದ್ದರಿಂದ ಆರ್ಥಿಕ ರಾಜಕೀಯ ಮತ್ತು ಸಾಮಾಜಿಕ ದೃಷ್ಟಿಗಳಿಂದ ವಯಸ್ಕನಿಗೆ ಓದು ಬರಹ ಅವಶ್ಯಕ ಎಂಬ ಅಂಶ ಒಪ್ಪಿಕೊಂಡಂತೆ ಆಯಿತು. ಆದ್ದರಿಂದ ವಯಸ್ಕರು ಓದು ಬರಹ ಕಲಿಯಲೇ ಬೇಕು.

ಕಲಿತ ಓದು ಬರಹವನ್ನು ಉಳಿಸಿಕೊಳ್ಳುವುದು ಹೆಚ್ಚಿನ ಕೆಲಸ. ಭಾರತದಲ್ಲಿ 1955-56ರಲ್ಲಿ ಒಂದು ಅಧ್ಯಯನ ನಡೆಯಿತು. ಅದನ್ನು ನಡೆಸಿದವರು ಮಸ್ತುಕ್ ಅಹಮದ್. ವಯಸ್ಕರ ತರಗತಿಯಲ್ಲಿ ತೇರ್ಗಡೆಯಾದ 1314 ಮಂದಿಯನ್ನು ಒಂದು ವರ್ಷದ ನಂತರ ಪರೀಕ್ಷಿಸಿದರು. ನಾಲ್ಕನೆಯ ತರಗತಿಯ ಅಕ್ಷರತೆಯ ಮಟ್ಟವನ್ನು ಉಳಿಸಿಕೊಂಡಿದ್ದವರು ಶೇಕಡ 48.9. ಮಹಾರಾಷ್ಟ್ರ ಗ್ರಾಮಶಿಕ್ಷಣಚಳುವಳಿಯ ಅಂಗವಾಗಿ ಅಕ್ಷರಸ್ಥರಾದ ವರಲ್ಲೈಕಿ ಓದುಬರಹ ಉಳಿಸಿ ಕೊಂಡಿದ್ದವರು ಶೇಕಡ 43.9 ಜನ. ಆದ್ದರಿಂದ ಗಳಿಸಿದ ಸಾಕ್ಷರತೆಯನ್ನು ಉಳಿಸಿಕೊಳ್ಳುವಂತಹ ಸಾಹಿತ್ಯದ ಅಗತ್ಯ ಹೆಚ್ಚಾಗಿದೆ. ಅದನ್ನು ಪ್ರಕಟಿಸುವ ಮುನ್ನ ವಯಸ್ಕರು ಯಾವ ವಿಷಯಗಳನ್ನು ಓದಲು ಇಚ್ಛಿಸುವರು? ಅವರಲ್ಲಿ ಓದುವ ಕುತೂಹಲವನ್ನು ಕೆರಳಿಸಲು ಬರೆದ ಪುಸ್ತಕಗಳು ಯಾವ ರೀತಿ ಇರಬೇಕು? ವಸ್ತು, ಪದಗಳ ಬಳಕೆ, ವಾಕ್ಯರಚನೆ, ವಿಷಯ ನಿರೂಪಣೆ ಮುಂತಾದುವುಗಳ ಬಗ್ಗೆ ಅಧ್ಯಯನ ಮಾಡ ಬೇಕಾದದ್ದು ಅಗತ್ಯ. ಶ್ರಮಪಟ್ಟು ಹೀಗೆ ಬರೆದ ಸಾಹಿತ್ಯ ಅವ ರಿಗೆ ಒಪ್ಪಿಗೆ ಆಗಬಲ್ಲದೆ ಎಂಬುದನ್ನು ಪ್ರಕಟಿಸುವ ಮುನ್ನ ತಿಳಿಯ ಬೇಕು. ಆದ್ದರಿಂದ ವಯಸ್ಕರ ಓದುವ ಆಸಕ್ತಿಯನ್ನು ತಿಳಿಯು ವುದು, ಅದಕ್ಕೆ ಅನುಗುಣವಾದ ಸಾಹಿತ್ಯ ರಚನೆ ಮತ್ತು ಅವರ ಮೌಲ್ಯಮಾಪನ -ಇವು ಮೂರು ವಯಸ್ಕರ ಶಿಕ್ಷಣ ಸಾಹಿತ್ಯ ರಚನೆಯ ಮುಖಗಳು. ಇವುಗಳನ್ನು ಪ್ರತ್ಯೇಕವಾಗಿ ವಿವರವಾಗಿ ಚರ್ಚಿಸುವುದೇ ಈ ಪುಸ್ತಕದ ಉದ್ದೇಶ.

## ೨. ವಯಸ್ಕರ ವಾಚನಾಭಿರುಚಿಗಳು

ವಯಸ್ಕರು ಓದುಬರಹ ಕಲಿಯಲಾರರು. 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ,' ಎಂಬ ನಾಣ್ಣುಡಿ ವಯಸ್ಕರು ಓದು ಬರಹ ಕಲಿಯಲಿಕ್ಕೂ ಅನ್ವಯಿಸುವಂತಹುದೆ!! ಈ ಅಭಿಪ್ರಾಯ ಇತ್ತೀಚಿನವರೆವಿಗೆ ಸಾಮಾನ್ಯವಾಗಿತ್ತು. ಆದರೆ ಈ ಭಾವನೆಗೆ ಆಧಾರಗಳಿಲ್ಲ. ಸಂಶೋಧನೆಗಳಿಂದ ಈ ಕಲ್ಪನೆ ಸುಳ್ಳು ಎಂದು ಕಂಡುಬಂದಿದೆ. ಥಾರನ್ ಡೈಕ್ ಎಂಬ ಮನಶ್ಶಾಸ್ತ್ರಜ್ಞನು ವಯಸ್ಕರ ಕಲಿಯುವಿಕೆಯ ಬಗ್ಗೆ ಸಂಶೋಧನೆ ನಡೆಸಿದ್ದಾನೆ. ಅವನು 30 ಅಥವ 40 ವಯಸ್ಸಿನವರು ಕಲಿಯಲಾರರು ಎಂಬ ಅಂಶಕ್ಕೆ ಆಧಾರಗಳಿಲ್ಲ ಎಂಬುದನ್ನು ವಿಶದಪಡಿಸಿದ್ದಾನೆ. ಜೀವನ ದಲ್ಲಿ ಯಾವಾಗಬೇಕಾದರೂ ಕಲಿಯಬಹುದು. ವಯಸ್ಸು ಅಡ್ಡಿ ಬರದು. ಓದುಬರಹ ಕಲಿಯಲು ವಯಸ್ಸು ಪ್ರಾಧಾನ್ಯವಲ್ಲ ಎಂಬ ಚೀಣಾದೇಶದ ನಾಣ್ಣುಡಿ ಇದೆ. ಆದರೆ ಕಲಿಯಲು ಹುಟ್ಟಿದಂದಿ ನಿಂದ 20ರಿಂದ 25 ವಯಸ್ಸಿನವರೆವಿಗೆ ಅತ್ಯುತ್ತಮವಾದ ಕಾಲ. ಕಲಿಯುವ ಸಾಮರ್ಥ್ಯ ಅನಂತರ ವರ್ಷಕ್ಕೆ ಸರಾಸರಿ ಶೇಕಡ 1ರಂತೆ 42 ವಯಸ್ಸಿನವರೆವಿಗೂ ಕಡಿಮೆ ಆಗುವುದು ಎಂದು ಒಂದು ಅಭಿಪ್ರಾಯ. ಕಲಿಯುವ ಸಾಮರ್ಥ್ಯ 55 ವರ್ಷದವರೆವಿಗೂ ಇರುವುದು. ಆದರೆ ಅದು ಲೆಕ್ಕಕ್ಕೆ ಬಾರದ ಪ್ರಮಾಣದಲ್ಲಿ ಕ್ಷೀಣಿಸು ವುದು ಎಂಬುದು ಇನ್ನೊಂದು ಅಭಿಪ್ರಾಯ. ಕಲಿಯಲು ವಯಸ್ಸು ಅಡ್ಡಿಬರದು. ಹುಟ್ಟಿನಿಂದ ಸಾಯುವವರೆವಿಗೂ ಕಲಿಯುವ ಅವಕಾಶವಿದೆ. ಕಲಿಯುವ ಶಕ್ತಿ ಒಂದು ಗೊತ್ತಾದ ವಯಸ್ಸಿನ

ವರೆಗೆ ಹೆಚ್ಚಿ ನಂತರ ಕುಗ್ಗುವುದು. ಆವುರೆ ಆ ಶಕ್ತಿ ಲಿಕ್ಕಕ್ಕೆ ಬಾರದ ಪ್ರಮಾಣದಲ್ಲಿ ಕುಗ್ಗುವುದೆಂಬುದು ಸಂಶೋಧಕರ ಅಭಿಪ್ರಾಯ. ಈ ವಿಷಯ ಹೇಗಾದರೂ ಇರಲಿ, ವಯಸ್ಕರ ಆಸಕ್ತಿಗಳಿಗೂ ಅವರು ಓದು ಕಲಿಯುವುದಕ್ಕೂ ನಿಕಟ ಸಂಬಂಧವಿದೆ.

ಅಕ್ಷರ ಪ್ರಚಾರಕ್ಕೆ ಸಂಬಂಧಪಟ್ಟಂತೆ, 15ರಿಂದ 45ವಯಸ್ಸಿನವರು ವಯಸ್ಕರು. ಅವರಿಗೆ ಓದುಬರಹ ಕಲಿಸುವ ಕಾರ್ಯ ಪ್ರಾಮುಖ್ಯವಾದುದು. ಕಲಿತ ಓದುಬರಹವನ್ನು ಉಳಿಸಿಕೊಳ್ಳುವುದು ಅಷ್ಟೇ ಪ್ರಾಧಾನ್ಯವಾದುದು. ಕಾರಣ, ಗಳಿಸಿದ ಓದುಬರಹವನ್ನು ಉಳಿಸಿಕೊಳ್ಳಬೇಕು ಹಾಗೂ ಬೆಳೆಸಿಕೊಳ್ಳಬೇಕು. ಇಲ್ಲದಿದ್ದರೆ ಅಕ್ಷರಪ್ರಚಾರ ಹೊಳೆಯಲ್ಲಿ ಹುಣಿಸೆ ಹಣ್ಣು ಕಿವುಚಿದಂತೆ. ಗಳಿಸಿದ ಸಾಕ್ಷರತೆಯನ್ನು ಉಳಿಸಿಕೊಳ್ಳುವುದು ಒಂದು ಪ್ರಯತ್ನ. ಅದು ಹೆಚ್ಚಾಗಿ ಸ್ವಪ್ರಯತ್ನದಿಂದಲೇ ಸಾಧ್ಯ. ಈ ಪ್ರಯತ್ನವು ಸೂಕ್ತ ಸಾಹಿತ್ಯವಿಲ್ಲದೆ ಸಾಧ್ಯವಿಲ್ಲ. ಆದ್ದರಿಂದ ಸಾಕ್ಷರತೆಗೆ ಪೋಷಕವಾದ ಸೂಕ್ತ ಸಾಹಿತ್ಯದ ರಚನೆ ಆಗಬೇಕು.

ಸೂಕ್ತವಾದ ಸಾಹಿತ್ಯ ಅಂದರೇನು? ವಯಸ್ಕ ಓದುಗರಿಗೆ ಅರ್ಥವಾಗುವ ಭಾಷೆ ಮತ್ತು ಶೈಲಿಗಳಿಂದ ಕೂಡಿದುದೆ? ಅಥವಾ ಅವರಿಗೆ ಬೇಕಾದ ವಸ್ತುವನ್ನು ಕುರಿತದ್ದೆ? ಈ ಎರಡು ಅಂಶಗಳ ಸಮನ್ವಯ ಸಮರ್ಪಕವಾಗಿ ಅನುಸರಿಸಿ ರಚಿಸಿದ ಸಾಹಿತ್ಯ ಮಾತ್ರ ಹೊಸದಾಗಿ ಅಕ್ಷರ ಕಲಿತ ವಯಸ್ಕರಿಗೆ ಸೂಕ್ತವಾಗಿರುವುದು. ಮೊದಲಾಗಿ ವಯಸ್ಕರ ಆಸಕ್ತಿಗೆ ಅಥವ ಅಭಿರುಚಿಗೆ ತಕ್ಕಂತಹ ವಸ್ತುವಿನ ಆಯ್ಕೆ ಆವಶ್ಯಕ. ಅನಂತರ ಆಯ್ಕೆಮಾಡಿದ ವಸ್ತು ನಿರೂಪಣೆಯೂ ಸಹ ಅಷ್ಟೇ ಪ್ರಾಧಾನ್ಯವಾದುದು. ಈ ವಿಷಯ

ಗಳ ಬಗ್ಗೆ ಬರಹಗಾರನು ಸಾಹಿತ್ಯ ರಚಿಸುವ ಮುನ್ನ ಸರಿಯಾದ ಮಾಹಿತಿ ಪಡೆಯಬೇಕು.

ಓದುಗರ ವಾಚನಾಭಿರುಚಿಯನ್ನು ತಿಳಿಯುವುದು ಹೇಗೆ? ಅವರ ಅಭಿರುಚಿಯನ್ನು ತಿಳಿಯದೆ ರಚಿಸಿದ ಪುಸ್ತಕ ಓದುಗರಿಗೆ ಉಪಯೋಗಕ್ಕೆ ಬಾರದೆ ಹೋಗುವ ಸಂದರ್ಭವೇ ಹೆಚ್ಚು. ಆದ್ದರಿಂದ ಓದುಗರು ಓದಲಿಚ್ಛಿಸುವ ವಿಷಯಗಳು ಯಾವುವು ಎಂಬುದನ್ನು ತಿಳಿಯಬೇಕಾದುದು ಅಗತ್ಯ. ಇದನ್ನು ತಿಳಿಯಲು ಅನೇಕ ವಿಧಾನಗಳಿವೆ. 1) ಗ್ರಾಮ ಪುಸ್ತಕಭಂಡಾರಗಳ ದಾಖಲಾತಿಯನ್ನು ಪರಿಶೀಲಿಸುವುದು. ಅದರ ಪ್ರಕಾರ ಓದುಗರು ಒಯ್ದಿರುವ ಪುಸ್ತಕಗಳು ಯಾವುವು? ಯಾವ ಪುಸ್ತಕವನ್ನು ಹೆಚ್ಚುಬಾರಿ ಒಯ್ದಿದ್ದಾರೆ? ಜೊತೆಗೆ ಪುಸ್ತಕಭಂಡಾರದ ಅಧಿಕಾರಿಯೂ ಸಹ ಪುಸ್ತಕಗಳ ಬಳಕೆ ಬಗ್ಗೆ ತನ್ನ ಅಭಿಪ್ರಾಯ ನೀಡಬಹುದು. ಆದರೆ ಇದರಲ್ಲಿ ಕೆಲವು ನ್ಯೂನತೆಗಳಿವೆ. ಪುಸ್ತಕ ಪಡೆದಿದ್ದವನು ಓದಿದ್ದಾನೆಯೆ ಅಥವಾ ಇಲ್ಲವೆ? ತನಗಾಗಿ ಇಲ್ಲವೇ ತನ್ನ ಸ್ನೇಹಿತರಿಗಾಗಿ ಪುಸ್ತಕ ಪಡೆದಿದ್ದಾನೆಯೆ? ಓದುಗನು ತನ್ನ ಸ್ವಪ್ರತಿಷ್ಠೆಗಾಗಿ ಪುಸ್ತಕಗಳನ್ನು ತೆಗೆದುಕೊಂಡು ಹೋಗಿರಬಹುದು. ಈ ಎಲ್ಲ ಸಂದರ್ಭಗಳಲ್ಲಿಯೂ ಪುಸ್ತಕಗಳನ್ನು ಓದದೆ ವಾಪಸು ಮಾಡಿರಬಹುದು. ವಾಸ್ತವ ಪರಿಸ್ಥಿತಿಯನ್ನು ಪರಿಶೀಲಿಸೋಣ. ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಓದುವ ಹವ್ಯಾಸ ಇಲ್ಲದಿರುವುದೇ ಒಂದು ಕೊರತೆ. ಹಾಗೂ ಅವರ ಪೈಕಿ ಶೇಕಡ 10 ಮಂದಿ ಮಾತ್ರ ಓದುವ ಮನಸ್ಸು ಉಳ್ಳವರು. ಇವರ ಪೈಕಿ ಪ್ರತಿ ಮೂವರಲ್ಲಿ ಒಬ್ಬರಿಗೆ ಓದುವ ಅಭ್ಯಾಸವೇ ಇಲ್ಲ. ಆದರೂ ಈ ಶೇಕಡ 10 ಮಂದಿ ತಮ್ಮ ಇಡೀ ಜೀವಮಾನದಲ್ಲಿ ಸರಾಸರಿ ಕೇವಲ 3–4

ಪುಸ್ತಕಗಳನ್ನು ಮಾತ್ರ ಓದಿದವರು ಎಂಬುದು ಸಂಶೋಧನೆಯಿಂದ ವ್ಯಕ್ತವಾಗಿದೆ. ಆದ್ದರಿಂದ ಹಂಚಿಕೆಯ ದಾಖಲಾತಿಯಿಂದ ಓದುಗರಿಗೆ ಬೇಕಾದ ಪುಸ್ತಕಗಳು ಯಾವುವು? ಎಂಬುದನ್ನು ತಿಳಿಯಲು ಸಾಧ್ಯವಾಗದೆ ಹೋಗಬಹುದು. ಮೇಲಾಗಿ ಗ್ರಾಮ ಪುಸ್ತಕ ಭಂಡಾರಗಳಲ್ಲಿ ವಯಸ್ಕರ ಆಸಕ್ತಿಗೆ ಅನುಗುಣವಾದ ಎಲ್ಲಾ ತರಹ ಪುಸ್ತಕಗಳು ದೊರಕದೆ ಇರಬಹುದು. ಹೊಸದಾಗಿ ಅಕ್ಷರಸ್ಥರಾದ ವಯಸ್ಕರು ಪುಸ್ತಕಗಳನ್ನು ಬಳಸದಿರಲು ಕಾರಣಗಳು ಏನು ಎಂಬುದನ್ನು ತಿಳಿಯಲು ಭಾರತದಲ್ಲಿ ಒಂದು ಸಮೀಕ್ಷೆ ನಡೆಯಿತು. 1955–56ನೇ ಸಾಲಿನಲ್ಲಿ ಹಿಂದೀಭಾಷೆ ಮಾತನಾಡುವ ಐದು ರಾಜ್ಯಗಳಲ್ಲಿ ದೆಹಲಿಯ ಜಮಿಯ ಮಿಲಿಯ ಸಂಸ್ಥೆ ಒಂದು ಸಂಶೋಧನೆ ನಡೆಸಿತು. ಅದರ ವರದಿ ಕೆಳಗೆ ಕಂಡಂತೆ ಇದೆ.

ಹೊಸದಾಗಿ ಅಕ್ಷರಸ್ಥರಾದ ವಯಸ್ಕರು ಪುಸ್ತಕಗಳನ್ನು ಓದದೆ ಇರಲು ನೀಡಿರುವ ಕಾರಣಗಳ ಪಟ್ಟಿ.

| ಕಾರಣಗಳು | ಸಂಖ್ಯೆ | ಶೇಕಡ |
|---|---|---|
| 1) ಪುಸ್ತಕಭಂಡಾರವಿಲ್ಲ | 122 | 49.2 |
| 2) ಪುಸ್ತಕಭಂಡಾರ ಚೆನ್ನಾಗಿಲ್ಲ | 29 | 11.7 |
| 3) ಬಿಡುವಿಲ್ಲ | 79 | 31.9 |
| 4) ಓದಲು ಕಷ್ಟವಾಗಿರುವುದು | 13 | 5.2 |
| 5) ಓದಲು ಇಷ್ಟವಿಲ್ಲ | 5 | 2.0 |
| | 248 | 100.0 |

ಎರಡನೆಯದಾಗಿ ಪುಸ್ತಕದ ಮಾರಾಟಗಾರರು, ಪ್ರಕಟಣಕಾರರು ಮತ್ತು ಹಂಚಿಕೆದಾರರಿಂದ ಪುಸ್ತಕಗಳ ಬಳಕೆಯನ್ನು ತಿಳಿಯಬಹುದೆ? ಪುಸ್ತಕಗಳನ್ನು ಕೊಳ್ಳುವ ವಯಸ್ಕರು ಅತಿ ವಿರಳ.

ಪುಸ್ತಕಭಂಡಾರದವರು ಮತ್ತು ಸಮಾಜಶಿಕ್ಷಣ ಸಂಸ್ಥೆಯವರೇ ಹೆಚ್ಚಾಗಿ ಪುಸ್ತಕಗಳನ್ನು ಕೊಂಡು ವಯಸ್ಕರ ಪುಸ್ತಕ ಭಂಡಾರ ಗಳಿಗೆ ನೇರವಾಗಿ ಹಂಚುವರು. ಆದ್ದರಿಂದ ಈ ರೀತಿಯಲ್ಲಿ ವಯಸ್ಕರ ಓದುವ ಆಸಕ್ತಿಯನ್ನು ತಿಳಿಯಲು ಆಗುವುದಿಲ್ಲ.

ಭಾವಿ ಓದುಗರ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಜೀವನವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವರ ಆಸಕ್ತಿಗಳನ್ನು ತಿಳಿಯಬಹುದೆ? ಪ್ರಾಯಶಃ ಈ ರೀತಿ ತಿಳಿದರೂ ಅದು ಸಮಂಜಸವಾಗಲಾರದು.

ಸಾಮೂಹಿಕ ಅಭಿವೃದ್ಧಿ ಯೋಜನೆಯನ್ನು ರೂಪಿಸಿದ ತಜ್ಞರ ಅಭಿಪ್ರಾಯ ಪಡೆಯಬಹುದೆ? ಪ್ರಾಯಶಃ ಅವರಿಂದ ಪಡೆದ ಅಭಿಪ್ರಾಯ ಸ್ವಜವಾದ ಚಿತ್ರವನ್ನು ಪ್ರತಿಬಿಂಬಿಸಲಾರದು. ಸಾಮೂಹಿಕ ಅಭಿವೃದ್ಧಿ ಕಾರ್ಯಕ್ರಮದ ಅಂಗವಾಗಿ ಸಮಾಜ ಶಿಕ್ಷಣ ಇಲಾಖೆ ಕೆಲಸ ಮಾಡುತ್ತಿದೆ. ಈ ಕ್ಷೇತ್ರದಲ್ಲಿ ನಿರತ ರಾಗಿರುವ ಕಾರ್ಯಕರ್ತರಿಗೆ ಪ್ರಶ್ನಾವಳಿಗಳನ್ನು ಕಳುಹಿಸಿ ಅವರ ಅಭಿ ಪ್ರಾಯಗಳನ್ನು ಪಡೆದು ಅವುಗಳನ್ನು ಕ್ರೋಢೀಕರಿಸಬಹುದು. ಇದ ರಲ್ಲಿ ಒಂದು ಕೊರತೆ ಕಾಣಬರುವುದು. ಅಭಿಪ್ರಾಯವನ್ನು ತಿಳಿಸು ವವರು ಕೆಲವು ವೇಳೆ ಓದುಗರನ್ನು ಸರಿಯಾಗಿ ಪ್ರತಿಬಿಂಬಿಸದೆ ಇರ ಬಹುದು. ಅಥವಾ ಪೂರ್ವಾಗ್ರಹ ಪೀಡಿತವಾದ ಅಭಿಪ್ರಾಯ ಗಳನ್ನು ತಿಳಿಸಬಹುದು.

ಎಲ್ಲಕ್ಕಿಂತಲೂ ಉತ್ತಮವಾದ ಮಾರ್ಗ ಒಂದಿದೆ. ಹೊಸ ದಾಗಿ ಅಕ್ಷರಸ್ಥರಾದ ವಯಸ್ಕರನ್ನು ಭೇಟಿಮಾಡಿ ಅವರ ಅಭಿ ಪ್ರಾಯಗಳನ್ನು ಪಡೆದು ಕ್ರೋಢೀಕರಿಸುವುದು. ಇದು ಅತ್ಯುತ್ತಮ ವಾದ ಮಾರ್ಗವೆಂದು ಕಂಡುಬಂದಿದೆ. ಉದಾಹರಣೆಗೆ, ಕೆಲವು

ನಿದರ್ಶನಗಳನ್ನು ನೀಡಬಹುದು. ಬೆಂಗಳೂರು ಮೈಸೂರು ರಸ್ತೆಯಲ್ಲಿ ಬೆಂಗಳೂರಿನಿಂದ ಸುಮಾರು 8 ಮೈಲಿ ದೂರದಲ್ಲಿ ಕೆಂಗೇರಿ ವಿದ್ಯಾಪೀಠ ಎಂಬ ಸಂಸ್ಥೆ ಇದೆ. ಅಲ್ಲಿ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ಭಾರತ ಸರಕಾರದ ನೆರವಿನಿಂದ 1972ನೇ ಸಾಲಿನಲ್ಲಿ ಎರಡು ತಿಂಗಳ ಕಾಲ ಸಾಹಿತ್ಯ ರಚನಾಲಯ ನಡೆಸಿತು. ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಸೂಕ್ತ ಸಾಹಿತ್ಯ ರಚಿಸುವುದು ಅದರ ಉದ್ದೇಶವಾಗಿತ್ತು. ವಿವಿಧ ಇಲಾಖೆಗಳ 17 ಮಂದಿ ಬರಹಗಾರರು ಭಾಗವಹಿಸಿದ್ದರು. ಇಲ್ಲಿ ರಚಿತವಾದ ಕೃತಿಗಳ ಮೌಲ್ಯಮಾಪನೆ ನಡೆಯಿತು. ಕೆಂಗೇರಿ ವಿದ್ಯಾಪೀಠದಿಂದ ಬೆಂಗಳೂರು ಮೈಸೂರು ರಸ್ತೆಯಲ್ಲಿ ದೇವಿಗೆರೆ ಎಂಬ ಹಳ್ಳಿ ಇದೆ. ಅಲ್ಲಿ ಭಾವಿ ಓದುಗರ ಮುಂದೆ 'ದನಗಳ ಬೇನೆ' ಎಂಬ ಕೃತಿಯ ಕೆಲವು ಆಯ್ಕೆ ಮಾಡಿದ ಭಾಗಗಳನ್ನು ಓದಲಾಯಿತು. ಅಲ್ಲಿದ್ದವರ ಪೈಕಿ ಒಬ್ಬನು "ನಮಗೆ ರೋಗದ ವಿಷಯ ತಿಳಿದಿದೆ. ಅವುಗಳನ್ನು ವಾಸಿ ಮಾಡುವ ಬಗೆ ಹೇಗೆ?" ಎಂಬುದನ್ನು ತಿಳಿಸಿ ಸ್ವಾಮಿ ಎಂದು ಕೇಳಿದನು. ಅದರ ಬಗ್ಗೆ ಮುಂದಿನ ಪುಟದಲ್ಲಿ ಬರೆದಿರುವುದಾಗಿ ತಿಳಿಸಲಾಯಿತು. ಅದರಿಂದ ಆತನಿಗೆ ಸಮಾಧಾನ ಆಯಿತು. ಮೌಲ್ಯಮಾಪನೆ ಮುಗಿದ ನಂತರವೂ ಸಹ ಹಳ್ಳಿಗರು ಬರಹಗಾರರೊಡನೆ ದನಗಳ ಬೇನೆ ಮತ್ತು ಅವುಗಳನ್ನು ವಾಸಿಮಾಡುವ ವಿಷಯದಲ್ಲಿ ಸುಮಾರು ಒಂದು ಗಂಟೆಕಾಲ ಹೆಚ್ಚಿನ ಚರ್ಚೆ ಮಾಡಿ ವಿಷಯತಿಳಿದುಕೊಂಡರು. ಪುಸ್ತಕ ಬರೆದವರು ಪಶು ವೈದ್ಯ ಇಲಾಖೆಯವರು.

ಕೆಂಗೇರಿ ವಿದ್ಯಾಪೀಠಕ್ಕೆ ಕೇವಲ ಅರ್ಧ ಮೈಲಿ ದೂರದಲ್ಲಿ ಕೋಡಿಪಾಳ್ಯ ಎಂಬ ಗ್ರಾಮ ಇದೆ. ಅಲ್ಲಿ ಟೊಮಾಟೊ ಬೆಳೆಯ

ಪುಸ್ತಕದ ಮೌಲ್ಯಮಾಪನೆ ನಡೆಯಿತು. ಅಲ್ಲಿ ಕೆಲವರು "ಅದಿರಲಿ, ರಾತ್ರಿಯೆಲ್ಲಾ ನಿದ್ರೆ ಬರೋದಿಲ್ಲ. ಸೊಳ್ಳೆಯ ಕಾಟ ಜಾಸ್ತಿ. ಅದಕ್ಕೆ ಏನು ಮಾಡಬೇಕು ಹೇಳಿ." ಎಂದು ಕೆಲವರು ಕೇಳಿದರು. ಸೊಳ್ಳೆಯಮೇಲೂ ಒಂದು ಪುಸ್ತಕ ಬರೆಯಲಾಗಿತ್ತು. ಅದರ ಮೌಲ್ಯಮಾಪನೆ ಅಲ್ಲಿಯೇ ಆಗಬೇಕಿತ್ತು. "ಸೊಳ್ಳೆಯ ಬಗ್ಗೆ ಒಂದು ಪುಸ್ತಕ ಬರೆದಿದೆ. ಅದನ್ನು ಈಗ ಓದುತ್ತೇನೆ" ಎಂದು ಹೇಳಿದಾಗ ಅವರ ಮನಸ್ಸಿನಲ್ಲಿ ತೃಪ್ತಿಯ ಮನೋಭಾವ ಮೂಡಿತು.

ಪಂತರಪಾಳ್ಯ ಕೆಂಗೇರಿ ವಿದ್ಯಾಪೀಠದಿಂದ 5 ಮೈಲಿ ದೂರದಲ್ಲಿದೆ. ಅಲ್ಲಿ ಮೌಲ್ಯಮಾಪನೆ ಮಾಡಿದ ಪುಸ್ತಕಗಳ ಪೈಕಿ ವೀಳೆಯದೆಲೆಯ ಮೇಲೆ ಬರೆದ ಪುಸ್ತಕವೂ ಒಂದು. ಆ ಪುಸ್ತಕವನ್ನು ಓದುತ್ತಿದ್ದಾಗ ವೀಳೆಯದೆಲೆ ತೋಟ ಮಾಡಿದ್ದ ಒಬ್ಬನು ಹಿಂದೆ ಕೂತಿದ್ದವನು ಮುಂದಕ್ಕೆ ಬಂದು ಕೂತನು. ಪ್ರಾಯಶಃ ಆತನಿಗೆ ಓದಲು ಕುತೂಹಲ ಇದೆ ಎಂಬ ಭಾವನೆ ನಮಗೆ ಮೂಡಿತು. ಆತನನ್ನು ಓದಲು ಕೇಳಿದೆವು. "ನನಗೆ ಓದು ಬರದು. ಆದರೆ ವೀಳೆಯದೆಲೆ ಬೆಳೆಯುತ್ತಿದ್ದೇನೆ. ಆದ್ದರಿಂದ ನಾನು ವಿಷಯ ತಿಳಿಯಲು ಮುಂದೆ ಬಂದು ಕುಳಿತೆ" ಎಂದನು.

ಕಾರ್ಮಿಕರ ಸಮಸ್ಯೆಗಳ ಮೇಲೆ ಒಂದು ಪುಸ್ತಕವನ್ನು ಮೈಲ್ಕಂಡ ಸಾಹಿತ್ಯ ರಚನಾಲಯದಲ್ಲಿ ಬರೆಸಲಾಗಿತ್ತು. ಪಂತರಪಾಳ್ಯ, ಕಾರ್ಮಿಕರು ವಾಸಿಸುವ ಗ್ರಾಮ. ಕೇವಲ ಕಾರ್ಮಿಕ ಓದುಗರನ್ನು ಮಾತ್ರ ಕೂಡಿಸಿಕೊಡಬೇಕೆಂದು ಅಲ್ಲಿಯ ಯುವಕ ಸಂಘದ ಅಧ್ಯಕ್ಷರಿಗೆ ಕೇಳಿಕೊಳ್ಳಲಾಯಿತು. ಅಂತೆಯೇ ಮಾರನೇ ದಿನ ಕಾರ್ಮಿಕರನ್ನು ಸೇರಿಸಿದ್ದರು. ಹೊಸದಾಗಿ ಓದುಬರಹ ಕಲಿತ

ವೆಸೂ ಅವರಲ್ಲಿದ್ದರು. ಜೊತೆಗೆ ಇನ್ನೂ ಹೆಚ್ಚಿನ ಓದುಬರಹ ಕಲಿತವರೂ ಅವರಲ್ಲಿದ್ದರು. ಆಗತಾನೆ ಅಲ್ಲಿ ಒಂದು ಕಾರ್ಮಿಕರ ಮುಷ್ಕರ ನಡೆಯುತ್ತಿತ್ತು. ಆದ್ದರಿಂದ ಆ ವಿಷಯದ ಬಗ್ಗೆ ತಿಳಿಯಲು ಕುತೂಹಲದಿಂದ ಎಲ್ಲರೂ ಬಂದಿದ್ದರು. ಪುಸ್ತಕ ಬರೆದವರು ಕಾರ್ಮಿಕ ಇಲಾಖೆಯ ಅಧಿಕಾರಿಗಳು ಎಂದು ಅವರಿಗೆ ತಿಳಿಯಿತು. ಆದ್ದರಿಂದ ಅವರಲ್ಲಿ ಹೆಚ್ಚಿನ ಆಸಕ್ತಿ ಮೂಡಿತು. ಪುಸ್ತಕದ ಕೆಲವು ಭಾಗಗಳನ್ನು ಓದಿಸಿ ಆ ಭಾಗಗಳು ಅರ್ಥವಾಗಿವೆಯೆ ಅಥವಾ ಇಲ್ಲವೇ ಎಂಬುದನ್ನು ತಿಳಿಯಲಾಯಿತು. ನಂತರ ಅವರು ಪ್ರಸಕ್ತ ಮುಷ್ಕರದ ಸಮಸ್ಯೆಗಳನ್ನು ಕಾರ್ಮಿಕ ಅಧಿಕಾರಿಗಳೊಡನೆ ಚರ್ಚೆಮಾಡಿದರು. ಅವುಗಳಿಗೆ ಪರಿಹಾರ ಕಂಡುಕೊಂಡರು. ಕಡೆಯಲ್ಲಿ ಅವರ ಮುಖದಲ್ಲಿ ನಗೆ ಮೂಡಿತು. ತೃಪ್ತಿಯ ಮನೋಭಾವ ಕಂಡುಬರುತ್ತಿತ್ತು. "ತಾವು ಬಂದಿದ್ದು ಬಹಳ ಅನುಕೂಲ. ನಮ್ಮ ಸಮಸ್ಯೆಗಳಿಗೆ ಒಳ್ಳೇ ಉತ್ತರ ದೊರಕಿತು" ಎಂದು ತಿಳಿಸಿದರು ಅಲ್ಲಿದ್ದ ಕಾರ್ಮಿಕರು. ತಾವು ಓದಲು ಇಚ್ಛಿಸುವ ವಿಷಯಗಳು ಯಾವುವು ಎಂಬ ಬಗ್ಗೆ ಭಾವಿ ಓದುಗರು ಬೆಳಕನ್ನು ಚೆಲ್ಲಬಲ್ಲರು.

ಸಂಶೋಧನೆಗಳ ವಿವರಗಳು

ಹೊರದೇಶಗಳಲ್ಲಿ ವಯಸ್ಕರ ಓದುವ ಆಸಕ್ತಿಗಳನ್ನು ತಿಳಿಯಲು ನಡೆದಿರುವ ಪ್ರಯತ್ನಗಳ.ವಿವರಗಳನ್ನು ತಿಳಿಯೋಣ. ಹಿಂದೆ ಅಮೇರಿಕದಲ್ಲಿ ಎರಡು ಸಂಸ್ಥೆಗಳಿದ್ದವು. ಅವು ಅಮೇರಿಕ ಪುಸ್ತಕ ಭಂಡಾರಮಂಡಳಿ ಮತ್ತು ವಯಸ್ಕರ ಶಿಕ್ಷಣಮಂಡಳಿ. 1926ರಲ್ಲಿ ಈ ಎರಡು ಸಂಸ್ಥೆಗಳು ಸೇರಿ ಒಂದು ಸಮಿತಿಯನ್ನು ರಚಿಸಿದವು.

ವಯಸ್ಕರು ಓದಲಿಚ್ಛಿಸುವ ವಸ್ತು ಹಾಗೂ ಹವ್ಯಾಸಗಳ ಬಗ್ಗೆ ತಿಳಿಯುವುದು ಸಂಶೋಧನೆಯ ಉದ್ದೇಶವಾಗಿತ್ತು. ಈ ಕಾರ್ಯ ಭಾರವನ್ನು ಡಬ್ಲ್ಯು.ಎಸ್.ಗ್ರೇ ಮತ್ತು ಮನ್ರೋ ವಹಿಸಿಕೊಂಡರು. ವಯಸ್ಕರು ಓದಲು ಅಪೇಕ್ಷಿಸುವ ಪುಸ್ತಕ, ಮಾಸ ಪತ್ರಿಕೆ ಮತ್ತು ವೃತ್ತ ಪತ್ರಿಕೆಗಳನ್ನು ಕಂಡುಹಿಡಿಯುವುದಕ್ಕಿಂತ ಅವರಿಗೆ ವಿಷಯ ಗಳನ್ನು ಯಾವ ಮಾಧ್ಯಮಗಳ ಮೂಲಕ ತಿಳಿಸಬಹುದು; ಯಾವ ಮಾಧ್ಯಮಗಳು ಓದುಗರಿಗೆ ಹೆಚ್ಚು ಜನಪ್ರಿಯವಾಗಿವೆ ಎಂಬು ದನ್ನು ತಿಳಿಯುವುದು ಅಗತ್ಯ ಎಂಬ ಅಂಶ ಸಂಶೋಧನೆಯಿಂದ ವ್ಯಕ್ತವಾಯಿತು.

1931ರಲ್ಲಿ ವೇಪಲ್ಸ್ ಮತ್ತು ಟೈಲರ್ ಸಂಶೋಧನೆಯನ್ನು ಮುಂದುವರಿಸಿದರು. ಸ್ವಲ್ಪಮಟ್ಟಿನ ಶಿಕ್ಷಣದ ಹಿನ್ನೆಲೆಯನ್ನು ಹೊಂದಿರುವ ನಗರ ಪ್ರದೇಶವನ್ನು ಆರಿಸಿಕೊಂಡರು. ಓದುಗರ ವಯಸ್ಸು, ಕಸಬು, ವಾತಾವರಣ, ಲಿಂಗಭೇದ, ಶಾಲೆಯಲ್ಲಿ ಪಡೆದ ಶಿಕ್ಷಣದ ಹಿನ್ನೆಲೆ ಮತ್ತು ಓದುವ ಹವ್ಯಾಸ; ಈ ಆರು ಅಂಶ ಗಳು ವಾಚನಾಭಿರುಚಿಯ ಮೇಲೆ ಪರಿಣಾಮ ಬೀರುವುವು. ಒಟ್ಟಿ ನಲ್ಲಿ ವಯಸ್ಕರು ತಮ್ಮ ಜೀವನಕ್ಕೆ ನೇರವಾಗಿ ಸಂಬಂಧಪಟ್ಟ ವಿಷಯಗಳನ್ನು ಮಾತ್ರ ಓದಲಿಚ್ಛಿಸುವರು. ಆದರೆ ಇದರಲ್ಲಿ ಒಂದು ಕೊರತೆಯನ್ನು ಗಮನದಲ್ಲಿ ಇಡುವುದು ಅಗತ್ಯ. ಪುಸ್ತಕ ಗಳ ಅಭಾವ, ಓದುವ ಕೌಶಲ್ಯ ಸಾಕಾದಷ್ಟು ಬೆಳೆಯದಿರುವುದು, ಕ್ಲಿಷ್ಟವಾದ ಶೈಲಿ-ಈ ಅಂಶಗಳು ಪ್ರತಿಯೊಬ್ಬನ ಓದುಗಾರಿಕೆಯ ಮೇಲೆ ಪ್ರಭಾವ ಬೀರಬಹುದು.

ಹೆಂಗಸರು ಗಂಡಸರಿಗಿಂತ ಹೆಚ್ಚಾಗಿ ಕಾದಂಬರಿಯನ್ನು ಓದಲು ಇಚ್ಛಿಸುವರು. ಆದರೆ ಗಂಡಸರು ಕಸಬು ಮತ್ತು ಸಾರ್ವ

ಜನಿಕವಿಷಯಗಳ ಬಗ್ಗೆ ಓದಲು ಇಷ್ಟಪಡುವರು ಎಂಬ ಅಂಶ ಲೆಸ್ಟರ್ ಆಷ್‌ಹಿಮ್ ಅವರ ಸಂಶೋಧನೆಯಿಂದ ವ್ಯಕ್ತವಾಯಿತು. ಅಲ್ಲದೆ ಒಂದು ಗುಂಪಿನ ವ್ಯಕ್ತಿಗಳಿಗೆ ಅವರ ಗುಂಪಿನ ವ್ಯಕ್ತಿಯ ಬಗ್ಗೆ ಮಾತ್ರ ಆಸಕ್ತಿ ಇರುವುದು; ಪ್ರತಿಯೊಬ್ಬ ವ್ಯಕ್ತಿಯೂ ಮೊದಲಾಗಿ ತನ್ನ ಮತ್ತು ತನ್ನ ಸುತ್ತಮುತ್ತಲಿನ ಜನತೆಯ ಬಗ್ಗೆ ಆಸ್ಥೆ ವಹಿಸುವನು ಎಂಬ ಅಂಶ ಜಾನ್ ಶಿಡ್ಡೀಲ್ ಅವರ ಸಂಶೋಧನೆಯಿಂದ ಕಂಡುಬಂದಿದೆ. ಈ ಎಲ್ಲ ಸಂಶೋಧನೆಗಳು ಸ್ವಲ್ಪಮಟ್ಟಿಗೆ ಓದುಬರಹದ ಹಿನ್ನೆಲೆ ಇರುವ ಕ್ಷೇತ್ರಗಳಲ್ಲೇ ನಡೆದವು.

ಕೋಸ್ಟರೀಕ ಮತ್ತು ಮೆಕ್ಸಿಕೊ ದೇಶಗಳಲ್ಲಿ ನಡೆದ ಸಂಶೋಧನೆಗಳು:

ಇದು ಗ್ರಾಮಾಂತರ ಪ್ರದೇಶಗಳಲ್ಲಿ ನಡೆದ ಸಂಶೋಧನೆ. ಸೇತ್‌ಸ್ಪಾಲ್ಡಿಂಗ್ ಎಂಬುವನು ಕೋಸ್ಟರೀಕ ಮತ್ತು ಮೆಕ್ಸಿಕೊ ದೇಶಗಳಲ್ಲಿ 500ಮಂದಿ ಗ್ರಾಮಾಂತರ ವಯಸ್ಕರ ಅಭಿಪ್ರಾಯಗಳನ್ನು ಸಂಗ್ರಹಿಸಿದನು. ಮನರಂಜನೆ, ಆರೋಗ್ಯ ಮತ್ತು ಗೃಹ ನಿರ್ವಹಣೆ ವಿಷಯಗಳನ್ನು ಒಳಗೊಂಡ ಪುಸ್ತಕಗಳು ಗ್ರಾಮಸ್ಥರ ಆಸಕ್ತಿಗೆ ಸಂಬಂಧಪಟ್ಟವು. ಕೋಸ್ಟರೀಕ ದೇಶದಲ್ಲಿ ಕೃಷಿಗೆ ನಾಲ್ಕನೇ ಸ್ಥಾನವೂ, ಪುರಾಣಕಥೆಗೆ 5ನೇ ಸ್ಥಾನವೂ ದೊರಕಿತು. ಮೆಕ್ಸಿಕೊ ದೇಶದಲ್ಲಿ ಪುರಾಣಕಥೆಗೆ 4ನೇ ಸ್ಥಾನವೂ, ಕೃಷಿಗೆ 5ನೆಯ ಸ್ಥಾನವೂ ದೊರಕಿತು. ಒಟ್ಟಾರೆ ಅಭಿಪ್ರಾಯದ ಪ್ರಕಾರ ಎರಡೂ ದೇಶಗಳಲ್ಲಿ ಮನರಂಜನೆ, ಆರೋಗ್ಯ ಮತ್ತು ಗೃಹನಿರ್ವಹಣೆ ವಿಷಯಗಳಿಗೆ ಕ್ರಮವಾಗಿ 1, 2 ಮತ್ತು 3ನೇ ಸ್ಥಾನಗಳು ದೊರೆತವು. ಬೇಸಾಯಗಾರರು ಕೃಷಿಗೆ ಹೆಚ್ಚಾದ

ಆದ್ಯತೆ ನೀಡಿದರು. ಕೋಸ್ಟರೀಕ ಮತ್ತು ಮೆಕ್ಸಿಕೊ ದೇಶಗಳಲ್ಲಿ ಹೆಂಗಸರು ಆರೋಗ್ಯ ಮತ್ತು ಗೃಹನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡಿದರು. ಮನರಂಜನೆ ನೀಡುವ ವಿಷಯಕ್ಕೆ ಮೂರನೆಯ ಸ್ಥಾನ ದೊರಕಿತು. ಪ್ರತಿನಿತ್ಯದ ವ್ಯವಹಾರ, ಕಸಬು, ಮತ್ತು ವೈಯಕ್ತಿಕ ಪ್ರಗತಿಗೆ ಸಂಬಂಧಪಟ್ಟ ವಿಷಯಗಳ ಮೇಲೆ ಆಸಕ್ತಿ ಹೆಚ್ಚು. ಆದರೆ ಓದುವ ಹವ್ಯಾಸವನ್ನು ಅಭಿವೃದ್ಧಿಪಡಿಸಿ ಕೊಂಡಿರುವ ವಯಸ್ಕರು ಮನರಂಜನೆಗಾಗಿ ಓದುವರು.

ಬರ್ಮದೇಶದಲ್ಲಿ ನಡೆದ ಸಂಶೋಧನೆ :

1955ರಲ್ಲಿ ಬರ್ಮ ಭಾಷಾಂತರ ಸಂಘದವರು ಬರ್ಮಾದೇಶದಲ್ಲಿ ಒಂದು ಸಮೀಕ್ಷೆ ನಡೆಸಿದರು. 1,40,000 ಹಳ್ಳಿಗರು ವಾಸ ಮಾಡುವ ಕ್ಷೇತ್ರದಲ್ಲಿ ಅನುಭವಸ್ಥರಾದ 86 ಜನತಾ ಶಿಕ್ಷಣ ವ್ಯವಸ್ಥಾಪಕರು ಈ ಕಾರ್ಯದಲ್ಲಿ ನಿರತರಾದರು. ಸಮೀಕ್ಷೆಯಿಂದ ಕಂಡುಬಂದ ಅಂಶಗಳು ಹೀಗಿವೆ.

1) ಹಳ್ಳಿಯವರಿಗೆ ರಚಿಸುವ ಪುಸ್ತಕಗಳು ಸರಳವಾಗಿರ ಬೇಕು. ಹಾಗೂ ವಾಸ್ತವಿಕವಾಗಿ ಉಪಯೋಗವಾಗುವಂತಹ ವಿಷಯಗಳನ್ನು ಒಳಗೊಂಡಿರಬೇಕು-ಉದಾಹರಣೆಗೆ, ವ್ಯವಸಾಯ, ಆರೋಗ್ಯ, ಪೌರನೀತಿ ಮತ್ತು ಗೃಹನಿರ್ವಹಣೆ.

2) ಹಳ್ಳಿಗರು ಹೆಚ್ಚಾಗಿ ಮನರಂಜನೆ ನೀಡುವ, ಜನಪ್ರಿಯ ವಾಣಿಜ್ಯ ಪತ್ರಿಕೆಗಳು ಮತ್ತು ಧಾರ್ಮಿಕಸಾಹಿತ್ಯದಲ್ಲಿ ಆಸಕ್ತಿ ಹೊಂದಿರುವುದಾಗಿ ಕಂಡುಬಂದಿತು.

3) ಮೇಲ್ಕಂಡ 86 ಜನತಾ ಶಿಕ್ಷಣ ವ್ಯವಸ್ಥಾಪಕರ ಕ್ಷೇತ್ರ ಗಳ ಪೈಕಿ 71 ವ್ಯವಸ್ಥಾಪಕರ ಕ್ಷೇತ್ರಗಳಲ್ಲಿ ಗ್ರಾಮಪುಸ್ತಕ

ಭಂಡಾರಗಳಿದ್ದವು. ಆ ಪುಸ್ತಕಭಂಡಾರಗಳಲ್ಲಿ 10-18, 19-40 ಮತ್ತು 40ಕ್ಕೆ ಮೇಲ್ಪಟ್ಟ ವಯಸ್ಸಿನ ಓದುಗರು, ಸಮೀಕ್ಷೆ ನಡೆದ ಹಿಂದಿನ ವರ್ಷದಲ್ಲಿ, ಎರವಲಾಗಿ ಪಡೆದಿದ್ದ ಪುಸ್ತಕಗಳ ತಃಖ್ತೆಯನ್ನು ಪರಿಶೀಲಿಸಲಾಯಿತು. ಆ ಪುಸ್ತಕಗಳ ಬಳಕೆ ಆಶಾದಾಯಕವಾಗಿರ ಲಿಲ್ಲ. ಪ್ರತಿಯೊಂದು ಗುಂಪಿನವರು 100 ಕ್ಕಿಂತಲೂ ಕಡಿಮೆ ಪುಸ್ತಕಗಳನ್ನೇ ಪುಸ್ತಕ ಭಂಡಾರದಿಂದ ಪಡೆದಿರುವುದಾಗಿ ಗೊತ್ತಾ ಯಿತು. ಈ ಪುಸ್ತಕ ಭಂಡಾರಗಳಲ್ಲಿ ಹೆಚ್ಚಾಗಿ ಪಡೆದ ಪುಸ್ತಕಗಳ ಸರಾಸರಿ ಸಂಖ್ಯೆ ಈರೀತಿ ಇವೆ. (1) ಮನರಂಜನೆ ನೀಡುವ ಪುಸ್ತಕಗಳು, 3, (2) ಕೆಲಸ ಮಾಡುವ ಕ್ರಮವನ್ನು ತಿಳಿಸುವ ಹಾಗೂ ಸ್ವಯಂ ಬೋಧಿನಿ ಪುಸ್ತಕಗಳು, 2, (ಸ್ನೇಹಿತರನ್ನು ಸಂಪಾದಿಸುವುದು ಮತ್ತು ಅವರಮೇಲೆ ಪ್ರಭಾವ ಬೀರುವುದು, ಆರೋಗ್ಯ, ನಡತೆ, ಕ್ರೀಡೆಗಳ ಮೇಲೆ ಕೈಪಿಡಿಗಳು ) (3) ಧಾರ್ಮಿಕಸಾಹಿತ್ಯ, 3, (4) ಸಾಹಸಮಯವಾದವು, 2, ಸಾಹಸ ಕೃತ್ಯಗಳಿಲ್ಲದ ವಿವರಣಾತ್ಮಕ ಪುಸ್ತಕಗಳು, 5; (ವಿಶ್ವ ಸಂಸ್ಥೆ, ಬರ್ಮೀಯರ ಆರ್ಥಿಕ ಪರಿಸ್ಥಿತಿ, ಅಣುವಿಜ್ಞಾನದ ಕಥೆ ಮುಂತಾದುವು)

4) ವಯಸ್ಸಾದವರನ್ನು ಬಿಟ್ಟು ಉಳಿದವರು ವಾಣಿಜ್ಯ ಪತ್ರಿಕೆ ಗಳನ್ನು ಅಪೇಕ್ಷಿಸುತ್ತಿದ್ದರು.

5) ಹಳ್ಳಿಗರ ಜನಜೀವನಕ್ಕೆ ಬೇಕಾದ ಪುಸ್ತಕಗಳ ಆವಶ್ಯ ಕತೆ ಇದ್ದಾಗ್ಯೂ ಈ ಕ್ಷೇತ್ರದಲ್ಲಿ ಸಾಹಿತ್ಯ ಅಷ್ಟಾಗಿ ಇರಲಿಲ್ಲ. ಹಾಲಿ ಪ್ರಕಟವಾಗಿದ್ದ ಸಾಹಿತ್ಯದ ಪೈಕಿ ಮನರಂಜನೆ, ಧಾರ್ಮಿಕ ಮತ್ತು ಸ್ವಾವಲಂಬನೆಗೆ ಸಂಬಂಧಪಟ್ಟ ಪುಸ್ತಕಗಳನ್ನು ಪುಸ್ತಕ ಭಂಡಾರ ಮತ್ತು ವಾಚನಾಲಯಕ್ಕೆ ಆಗಾಗ್ಗೆ ಹೋಗುತ್ತಿದ್ದ

ಓದುಗರು ಅಪೇಕ್ಷಿಸುತ್ತಿದ್ದರು ಎಂಬುದಾಗಿ ಕಂಡುಬಂದಿತು.

6) ಹಳ್ಳಿಗರಿಗೆ ಪ್ರಿಯವಾದ ವಿಷಯಗಳನ್ನು ಒಳಗೊಂಡ ಪುಸ್ತಕಗಳ ಬಗ್ಗೆ ಆಸಕ್ತಿ ಇರಲಿಲ್ಲ. ನಿತ್ಯಜೀವನಕ್ಕೆ ಸಂಬಂಧ ಪಟ್ಟಿರಬೇಕು. ಸಾಹಸಮಯವಾಗಿರಬೇಕು. ಮನರಂಜನೆಯನ್ನು ನೀಡುವಂತಿರಬೇಕು. ಅಂತಹ ಪುಸ್ತಕಗಳನ್ನು ಹಳ್ಳಿಗರು ಅಪೇಕ್ಷಿಸುತ್ತಿದ್ದರು.

7) ಆದ್ದರಿಂದ ದೈನಂದಿನ ಸಮಸ್ಯೆಗಳ ಮೇಲೆ ಸರಳ ಮತ್ತು ಸಚಿತ್ರವಾದ ಪುಸ್ತಕಗಳನ್ನು ಪ್ರಕಟಿಸುವ ನೀತಿಯನ್ನು ಬರ್ಮ ಭಾಷಾಂತರ ಮಂಡಳಿಯವರು ಕೈಕೊಂಡರು.

8) ವಿಜ್ಞಾನಕ್ಕೆ ಸಂಬಂಧಪಟ್ಟ ಪುಸ್ತಕಗಳು ಜನಪ್ರಿಯವಾಗಿರಲಿಲ್ಲ. ವ್ಯಾವಹಾರಿಕ ವಿಷಯಗಳನ್ನು ಕಥೆಗಳ ರೂಪದಲ್ಲಿ, ಮನರಂಜನೆ ನೀಡುವಂತೆ ಗ್ರಾಮಾಂತರ ಜನರಿಗೆ ಬರೆಯುವುದು ಸೂಕ್ತ ಮತ್ತು ಯಶಸ್ವಿ ಆಗುವುದು ಎಂಬುದು ಸುಸ್ಪಷ್ಟ/ನುಸನರಿಕೆಯಾಗಿತ್ತು.

ಭಾರತದಲ್ಲಿ ನಡೆದ ಸಂಶೋಧನೆ:

ವಯಸ್ಕರ ಓದುವ ಆಸಕ್ತಿಗಳನ್ನು ಕಂಡು ಹಿಡಿಯುವ ಬಗ್ಗೆ ಭಾರತದಲ್ಲೂ ಸಂಶೋಧನೆಗಳು ನಡೆದಿವೆ. 1956ರಲ್ಲಿ ದೆಹಲಿಯ ಜಮಿಯ ಮಿಲಿಯ ಸಂಸ್ಥೆ ಈ ಬಗ್ಗೆ ಸಂಶೋಧನೆ ನಡೆಸಿತು. ಈ ಉದ್ದೇಶದಿಂದ ಬಿಹಾರ, ಮಧ್ಯಪ್ರದೇಶ, ಉತ್ತರಪ್ರದೇಶ, ರಾಜಾಸ್ಥಾನ, ಮತ್ತು ದೆಹಲಿ ಪ್ರದೇಶಗಳಲ್ಲಿ 1314 ಮಂದಿ ನವಸಾಕ್ಷರರನ್ನು ಭೇಟಿಮಾಡಿ ಅಭಿಪ್ರಾಯ ಸಂಗ್ರಹಿಸಲಾಯಿತು. ರಾಜ್ಯವಾರು, ವಯಸ್ಸು, ಕಸಬು ಮತ್ತು ಲಿಂಗವಾರು ಪ್ರಕಾರ ಓದುಗರ ಆಸಕ್ತಿಯನ್ನುಕಂಡುಹಿಡಿಯಲು ಅಧ್ಯಯನ ನಡೆಯಿತು. ಗಂಡಸರು

ಹೆಂಗಸರು ಎಂಬ ಭೇದವನ್ನು ಪರಿಗಣಿಸದೆ ಉಳಿದ ದೃಷ್ಟಿಕೋನ ಗಳಿಂದ ಪರಿಶೀಲನೆ ಮಾಡಿದಾಗ ವ್ಯವಸಾಯ, ಧರ್ಮ ಮತ್ತು ವ್ಯವಸಾಯಕ್ಕೆ ಸಂಬಂಧಪಟ್ಟ ಇತರ ವಿಷಯಗಳು ಕ್ರಮವಾಗಿ 1, 2 ಮತ್ತು 3ನೇ ಸ್ಥಾನವನ್ನು ಪಡೆದವು. ಉಳಿದ ವಿಷಯ ಗಳಾದ ಆತ್ಮಚರಿತ್ರೆ, ಆಟಪಾಟಗಳು, ಹಳ್ಳಿಯ ಹಾಡುಗಳು, ಆಧುನಿಕ ಕಥೆಗಳು, ಮಕ್ಕಳ ಯೋಗಕ್ಷೇಮ, ಆರೋಗ್ಯ ಮತ್ತು ನೈರ್ಮಲ್ಯ ಮುಂತಾದ ವಿಷಯಗಳಿಗೆ ಆದ್ಯತೆಗಳು ಆಯಾ ಗುಂಪಿಗೆ ಅನುಗುಣವಾಗಿ ವ್ಯತ್ಯಾಸಹೊಂದಿದವು.

ಭಾರತದ ವಿದೇಶಾಂಗ ನೀತಿ, ಪಂಚವಾರ್ಷಿಕ ಯೋಜನೆ, ವಿಶ್ವಶಾಂತಿ, ಪ್ರಜಾಪ್ರಭುತ್ವ ಮತ್ತು ಕುಟುಂಬಯೋಜನೆ–ಈ ವಿಷಯಗಳ ಬಗ್ಗೆ ವಯಸ್ಕರಿಗೆ ತಿಳಿವಳಿಕೆ ಇಲ್ಲ. ಆದರೆ ಆ ವಿಷಯಗಳ ಮೇಲೆ ಪುಸ್ತಕಗಳನ್ನು ಬರೆದಲ್ಲಿ ವಯಸ್ಕ ಓದುಗರಿಗೆ ಓದುವ ಇಚ್ಛೆ ಇದೆ ಎಂಬ ಅಭಿಪ್ರಾಯ ಕೆಳಗೆ ಕೊಟ್ಟಿರುವ ಅಂಕಿ ಅಂಶಗಳಿಂದ ತಿಳಿಯಬರುವುದು. ಆದ್ದರಿಂದ ಬರಹಗಾರರು ಈ ಬಗ್ಗೆ ಧೀರ್ಘವಾಗಿ ಆಲೋಚಿಸಿ ವಯಸ್ಕರ ಮನಸ್ಸಿಗೆ ಹಿಡಿಸು ವಂತೆ ಪುಸ್ತಕಗಳನ್ನು ಬರೆಯಬಹುದು. ಕೆಳಗೆ ಐದು ವಿಷಯ ಗಳನ್ನು ಕೊಟ್ಟಿದೆ. ಆ ವಿಷಯಗಳು ಶೇಕಡ ಎಷ್ಟು ಮಂದಿಗೆ ತಿಳಿದಿಲ್ಲ ಎಂಬುದನ್ನು ಮೊದಲನೇ ಕಾಲಂ ನಲ್ಲಿಯೂ ಹಾಗೂ ಆ ವಿಷಯಗಳ ಬಗ್ಗೆ ಪುಸ್ತಕ ಬರೆದಲ್ಲಿ ಶೇಕಡ ಎಷ್ಟು ಜನರು ಓದಲು ಆಸಕ್ತಿಹೊಂದಿರುವರು ಎಂಬ ಅಂಶವನ್ನು ಎರಡನೆಯ ಕಾಲಂ ನಲ್ಲಿಯೂ ಸಂಗ್ರಹಿಸಿ ಕೊಡಲಾಗಿದೆ.[2]

| ವಿಷಯ | ವಿಷಯ ತಿಳಿಯದವರು (ಶೇಕಡ) | ಪುಸ್ತಕ ಬರೆದಲ್ಲಿ ಓದುವ ಆಸಕ್ತಿಯುಳ್ಳವರು (ಶೇಕಡ) |
|---|---|---|
| ಭಾರತದ ವಿದೇಶಾಂಗ ನೀತಿ | 87.2 | 59.9 |
| ಪಾಂಚವಾರ್ಷಿಕಯೋಜನೆ | 69.3 | 70.2 |
| ವಿಶ್ವಶಾಂತಿ | 47.9 | 78.7 |
| ಪ್ರಜಾಪ್ರಭುತ್ವ | 82.0 | 63.4 |
| ಕುಟುಂಬಯೋಜನೆ | 82.3 | 64.4 |

ಮೈಸೂರು ರಾಜ್ಯ ವಯಸ್ಕರ ಶಿಕ್ಷಣಸಮಿತಿ ನಡೆಸಿದ ಸಂಶೋಧನೆ:

ಮೈಸೂರು ರಾಜ್ಯ ವಯಸ್ಕರ ಶಿಕ್ಷಣಸಮಿತಿ 1965ರಲ್ಲಿ ಒಂದು ಸಂಶೋಧನೆ ನಡೆಸಿತು. ಈ ಗ್ರಂಥಕರ್ತರೇ ಸಂಶೋಧಕರಾಗಿ ಕೆಲಸ ಮಾಡಿದರು. ಹಳೇ ಮೈಸೂರು ರಾಜ್ಯದಲ್ಲಿ ಎಂಟು ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ರಾತ್ರಿ ಶಾಲೆಗಳಲ್ಲಿ ಅಕ್ಷರಸ್ಥರಾದವರ ಪೈಕಿ 410ಮಂದಿ ವಯಸ್ಕರನ್ನು ಭೇಟಿಮಾಡಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಯಿತು. ಅನಂತರ ಅವುಗಳನ್ನೆಲ್ಲಾ ಕ್ರೋಢೀಕರಿಸಿ ಒಂದು ವರದಿಯನ್ನು ತಯಾರಿಸಲಾಯಿತು. ಅದರ ವಿವರಗಳು ಈ ರೀತಿ ಇವೆ.

1) ಸಾಕ್ಷರತಾ ಪ್ರಚಾರದ ಪರಿಣಾಮವಾಗಿ ವಯಸ್ಕರು ಹೆಚ್ಚು ಹೆಚ್ಚಾಗಿ ಹೊಸಹೊಸ ವಿಷಯಗಳನ್ನು ತಿಳಿಯಲು ಅಪೇಕ್ಷಿಸುವರು.

2) ವಯಸ್ಕರಿಗೆ ಈಗಾಗಲೇ ಇತರ ವಿವಿಧ ಮಾಧ್ಯಮಗಳ ಮೂಲಕ ವಿಷಯ ಪರಿಚಯವಾಗಿರುವುದು. ಭಾಷಣ, ಸಂಭಾ

ಷಣೆ, ಧಾರ್ಮಿಕಪ್ರಚಾರ ಮತ್ತು ಇನ್ನಿತರ ಮಾಧ್ಯಮಗಳ ಮೂಲಕ ಅನೇಕ ವಿಷಯಗಳ ಬಗ್ಗೆ ಮಾಹಿತಿ ದೊರಕಿರುವುದು ಸಹಜ. ಅಂತಹ ವಿಷಯಗಳನ್ನು ವಯಸ್ಕರು ಹೆಚ್ಚು ಹೆಚ್ಚಾಗಿ ಓದಲು ಅಪೇಕ್ಷಿಸುವರು ರಾಷ್ಟ್ರೀಯ ಅಭಿವೃದ್ಧಿ ಕಾರ್ಯಕ್ರಮ ಗಳಾದ ಪಂಚವಾರ್ಷಿಕಯೋಜನೆ ಮತ್ತು ಕುಟುಂಬಯೋಜನೆ ಬಗ್ಗೆ ಹಳ್ಳಿಗರಲ್ಲಿ ಸಾಕಾದಷ್ಟು ಅರಿವು ಉಂಟಾಗಿರುವುದು ಕಂಡು ಬಂದಿದೆ. ಅಂತಹ ವಿಷಯಗಳ ಮೇಲೆ ಪುಸ್ತಕಗಳನ್ನು ಬರೆದಲ್ಲಿ ವಯಸ್ಕರು ಓದಲು ಇಚ್ಛಿಸುವುದಾಗಿ ಕೆಳಗೆ ಕಾಣಿಸಿರುವ ಅಂಕಿ ಅಂಶಗಳಿಂದ ಕಂಡುಬಂದಿದೆ.[3]

| ವಿಷಯ | ಅರಿವು ಇರುವುದು (ಶೇಕಡ) | ಓದಲು ಆಸಕ್ತಿ ಉಳ್ಳವರು (ಶೇಕಡ) |
|---|---|---|
| ಪಂಚವಾರ್ಷಿಕಯೋಜನೆ | 20.48 | 75.12 |
| ಕುಟುಂಬಯೋಜನೆ | 27.56 | 76.8 |
| ಪ್ರಜಾಪ್ರಭುತ್ವ | 21.20 | 72.65 |
| ವಿಶ್ವಸಂಸ್ಥೆ | 8.53 | 59.5 |
| ವಿಶ್ವಶಾಂತಿ | 10.00 | 59.6 |

3) ಧಾರ್ಮಿಕ ಮತ್ತು ಜಾನಪದ ಸಾಹಿತ್ಯದಲ್ಲಿ ವಯಸ್ಕ ರಿಗೆ ಹೆಚ್ಚಾಗಿ ಆಸಕ್ತಿ ಇದೆ– ರಾಮಾಯಣ, ಭಾರತದ ಕಥೆಗಳು, ಶೈವ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಪಟ್ಟ ಹಾಡು ಮತ್ತು ತತ್ವಗಳು.

4) ಕಸಬು, ಸರಕಾರದೊಡನೆ ಸಂಬಂಧ ಮತ್ತು ಕುಟುಂಬದ

ಆರೋಗ್ಯ–ಈ ವಿಷಯಗಳಿಗೆ ಕ್ರಮವಾಗಿ ವಯಸ್ಕರು ಆದ್ಯತೆ ನೀಡಿರುವರು.

5) ಕಥೆ ಮತ್ತು ಕಾದಂಬರಿಗಳು ಜನಪ್ರಿಯವಾಗಿವೆ. ಆದ್ದರಿಂದ ವಯಸ್ಕರಿಗೆ ಸಾಹಿತ್ಯ ರಚಿಸುವಾಗ ಅವರಿಗೆ ಆಸಕ್ತಿ ಇರುವ ವಸ್ತುವನ್ನು ಕಥೆ ಮತ್ತು ಕಾದಂಬರಿಗಳ ಮೂಲಕ ತಿಳಿಸುವುದು ಒಳ್ಳೆಯದು ಎಂಬುದಾಗಿ ಕಂಡುಬಂದಿದೆ.

ಇಂದು ಜ್ಞಾನಸ್ಫೋಟನೆ ಆಗುತ್ತಿದೆ. ಸಾಮೂಹಿಕ ಸಾಕ್ಷರತಾ ಪ್ರಚಾರ ಕಾರ್ಯಕ್ರಮಗಳ ಜೊತೆಗೆ ಕ್ರಿಯಾತ್ಮಕ ಸಾಕ್ಷರತಾ ಯೋಜನೆಗಳೂ ಸಹ ಕಾರ್ಯಗತವಾಗಲಿವೆ. ಶಿಕ್ಷಣ ಕ್ಷೇತ್ರ ವಿಸ್ತಾರವಾಗುತ್ತಿದೆ. ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಯಲ್ಲಿದ್ದಾಗ್ಯೂ ಮಧ್ಯದಲ್ಲೇ ಶಾಲೆಯನ್ನು ಬಿಡುವವರ ಸಂಖ್ಯೆ ಹೆಚ್ಚಾಗಿದೆ. ಇವರಿಗೂ ಮತ್ತು ರಾತ್ರಿ ಶಾಲೆಗಳಲ್ಲಿ ಅಕ್ಷರಸ್ಥರಾದ ವಯಸ್ಕರಿಗೂ ಸೂಕ್ತ ಸಾಹಿತ್ಯ ರಚಿಸಬೇಕಾಗಿದೆ. ಅವರಲ್ಲಿ ತಿಳಿಯುವ ಕುತೂಹಲ ಮೂಡುತ್ತಿದೆ. ಆದ್ದರಿಂದ ಅವರ ಕುತೂಹಲವನ್ನು ಕೆರಳಿಸುವಂತೆ ಅವರ ಅಭಿರುಚಿಗೆ ತಕ್ಕಂತಹ ವಿಷಯಗಳ ಮೇಲೆ ಸಾಹಿತ್ಯ ರಚಿಸುವ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ. ಅಂತಹ ಪುಸ್ತಕಗಳನ್ನು ಒದಗಿಸಿದರೆ ಹೊಸದಾಗಿ ಓದು ಕಲಿತ ಅಕ್ಷರಸ್ಥರು ಕಲಿತಿದ್ದನ್ನು ಮರೆಯದೆ, ತಮ್ಮ ಓದುವ ಅಭ್ಯಾಸವನ್ನು ಬಲಪಡಿಸಿಕೊಂಡು ಸ್ವತಂತ್ರವಾಗಿ ಜ್ಞಾನಾರ್ಜನೆಗೆ ಮೊದಲುಮಾಡುತ್ತಾರೆ.

ಆಕರಸೂಚಿ

1. An evaluation of reading materials for new literates and study of their needs and interests. R. T. P. centre, Jamia Millia, New Delhi. page 114, table 32.

2. ,, page 70, table19.

3. Survey of reading needs and interests of adult new literates in Mysore State. (Report of a research study) Mysore State Adult Education Council, Mysore. Page 25, table 8d, Page 24, table 8c, Page 26. table 8e.

ಸಾಹಿತ್ಯ ರಚನಾ ಸೂತ್ರಗಳು:

ಮಾನವ ವರ್ಗಕ್ಕೂ ಮತ್ತು ಪ್ರಾಣಿವರ್ಗಕ್ಕೂ ಒಂದು ಅಂತರವಿದೆ. ಮಾನವನು ಆಲೋಚನೆ ಮಾಡುವ ಶಕ್ತಿ ಪಡೆದಿದ್ದಾನೆ. ತನ್ನ ಮನಸ್ಸಿನಲ್ಲಿರುವುದನ್ನು ಇನ್ನೊಬ್ಬರಿಗೆ ತಿಳಿಸ ಬಲ್ಲನು. ಕೋಪ, ಪ್ರೀತಿ, ದ್ವೇಷ, ಅಸಮಾಧಾನ, ಆದರ, ನೋವು, ಮನಸ್ಸಿನ ಹಗುರತೆ ಮುಂತಾದ ಭಾವನೆಗಳನ್ನು ಮುಖ ಚರ್ಯೆಯಲ್ಲಿ ತೋರುತ್ತಾನೆ. ಇಲ್ಲವೇ ಮಾತಿನಲ್ಲಿ ವ್ಯಕ್ತಪಡಿಸುತ್ತಾನೆ. ಕೆಲವರಿಗೆ ತಮ್ಮ ಅನುಭವಗಳನ್ನು ಪುಸ್ತಕ ರೂಪದಲ್ಲಿ ಬರೆದಿಡುವ ಶಕ್ತಿ ಇರುವುದು. ಅಂತಹವರು ತಮ್ಮ ವೈವಿಧ್ಯ ಪೂರ್ಣವಾದ ಅನುಭವಗಳನ್ನು ಸ್ವಾರಸ್ಯವಾಗಿ ಗ್ರಂಥರೂಪದಲ್ಲಿ ಬರೆದಿಟ್ಟಿರುವರು. ಅವುಗಳ ಪೈಕಿ ಕೆಲವು ಗ್ರಂಥಗಳು ಅನೇಕ ತಲೆ ಮಾರಿನವರೆವಿಗೂ ಉಪಯೋಗಕ್ಕೆ ಬರುವಂತಹವು. ಶತಮಾನದ ಹಿಂದೆ ಬರೆದ ಪುಸ್ತಕ ಇಂದಿಗೂ ಮತ್ತು ತಲೆತಲಾಂತರದವರೆಗೂ ಅವಲೋಕನ ಮಾಡಲು ಬರುವುದು. ಗ್ರಂಥಗಳು ಸರ್ವಕಾಲಿಕ ವಾದವು. ಮಾನವನ ಇತಿಹಾಸ ಮತ್ತು ಸಂಸ್ಕೃತಿ ನಿರೂಪಣೆ ಗ್ರಂಥಗಳಲ್ಲಿ ಶೇಖರವಾಗಿವೆ.

ಒಂದು ಕಾಲಕ್ಕೆ ಕೇವಲ ಕೆಲವರಿಗೆ ಮಾತ್ರ ಮುಡಿಪಾಗಿದ್ದ ಶಿಕ್ಷಣ ಇಂದು ಎಲ್ಲರ ಸ್ವತ್ತು ಎಂಬ ಭಾವನೆ ಬೆಳೆದಿದೆ. ಈ ಕಾರಣದಿಂದಲೇ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಿದೆ. ಮತ್ತು ಸಾರ್ವತ್ರಿಕವಾಗಿದೆ. ಅಲ್ಲದೆ ವಯಸ್ಕರು ಸಹ ಓದುಬರಹ ಕಲಿತು ಸುಶಿಕ್ಷಿತರಾಗಲು ಸರಕಾರಗಳು ಅವಕಾಶ ಕಲ್ಪಿಸಿವೆ. ಹೊಸದಾಗಿ

ಅಕ್ಷರಸ್ಥರಾದ ವಯಸ್ಕರಿಗೂ, ಪ್ರಾಥಮಿಕ ಶಾಲೆಯಲ್ಲಿ ಓದಿ ಮುಂದಕ್ಕೆ ಶಿಕ್ಷಣ ಮುಂದುವರಿಸದಿದ್ದವರಿಗೂ ಸೂಕ್ತ ಸಾಹಿತ್ಯ ಬೇಕಾಗಿದೆ. ಈ ಕಾರ್ಯ ಅತಿ ಆವಶ್ಯಕವಾಗಿದೆ. ಹಾಗೂ ಜರೂರಾಗಿ ಆಗಬೇಕಾದ ಕಾರ್ಯ.

ಸಾಹಿತ್ಯ ರಚಿಸುವ ಮುನ್ನ ಕೆಲವು ಮುಖ್ಯವಾದ ಅಂಶಗಳ ಬಗ್ಗೆ ಆಲೋಚಿಸುವುದು ಒಳ್ಳೆಯದು. ಹೊಸದಾಗಿ ಅಕ್ಷರಸ್ಥ ರಾದ ವಯಸ್ಕರು ಓದಲು ಬಯಸುವ ವಿಷಯಗಳು ಯಾವುವು ಎಂಬುದನ್ನು ಆಗಲೇ ವಿಚಾರಮಾಡಲಾಗಿದೆ. ವಯಸ್ಕರ ವಿದ್ಯಾ ಮಟ್ಟ ಏನು? ವಸ್ತುವಿನ ಬಗ್ಗೆ ಈಗಾಗಲೆ ಭಾವಿ ಓದುಗರಿಗೆ ಎಷ್ಟರಮಟ್ಟಿಗೆ ತಿಳಿದಿದೆ? ವಸ್ತುವಿನ ನಿರೂಪಣೆಯನ್ನು ಓದುಗರ ಕುತೂಹಲಕೆರಳುವಂತೆ ಮಾಡುವುದು ಹೇಗೆ? ಎಂಬ ಅಂಶ ಗಳನ್ನು ತಿಳಿಯಬೇಕಾಗಿದೆ. ಭಾಷೆಗೆ ಸಂಬಂಧಿಸಿದ ಕೆಲವು ಅಂಶ ಗಳನ್ನು ಆಲೋಚಿಸುವುದು ಒಳ್ಳೆಯದು.

ರಾತ್ರಿ ವಯಸ್ಕರ ಶಾಲೆಯಲ್ಲಿ ಓದಿದ ವಯಸ್ಕರಿಗೆ ಈಗಾ ಗಲೇ ಪರಿಚಯವಾಗಿರುವ ಪದಗಳೆಷ್ಟು? ವಯಸ್ಕರಿಗೆ ರಚಿಸುವ ಪಠ್ಯಪುಸ್ತಕಗಳನ್ನು ಶಾಸ್ತ್ರೀಯವಾಗಿ ರಚಿತವಾದ ಪದಪಟ್ಟಿಯಿಂದ ಮೊದಲನೆ 300 ಅಥವಾ 500 ಪದಗಳನ್ನು ಆರಿಸಿಕೊಂಡು ರಚಿಸ ಬಹುದು. ಈ ಪದಸಂಪತ್ತು 700ರ ವರೆಗೂ ಇರಬಹುದು. 250 ರಿಂದ 350 ಪುಟಗಳ ಪಠ್ಯಪುಸ್ತಕಗಳಲ್ಲಿ ಪದಗಳ ಗರಿಷ್ಠ ಮಿತಿ 700 ಇರಬಹುದು. ಈ ಗ್ರಂಥಕರ್ತರೇ ರಚಿಸಿರುವ ಬಾ ಅಣ್ಣ ಓದುಕಲಿ-ಹೆಚ್ಚು ಬೆಳೆ ಬೆಳಿ ಎಂಬ ಪಠ್ಯಪುಸ್ತಕವನ್ನು 218 ಪದ ಗಳಿಂದ ರಚಿಸಿರುವರು. ಅಂದರೆ ಹೊಸದಾಗಿ ಅಕ್ಷರಸ್ಥನಾದ ವಯಸ್ಕ ನಿಗೆ 500 ರಿಂದ 700 ಪದಗಳನ್ನು ಓದಿ ಅರ್ಥ ಮಾಡಿಕೊಳ್ಳುವ

ಅಭ್ಯಾಸ ಆಗಿರುವುದು. ಆದ್ದರಿಂದ ಈ ಮಟ್ಟದ ವಯಸ್ಕರಿಗೆ ಮೂರು ಹಂತಗಳಲ್ಲಿ 'ವಿದ್ಯಾಮಂದಿರ'[1] ಪುಸ್ತಕಗಳನ್ನು ರಚಿಸ ಬಹುದು. ಈ ಹಂತದ ಪುಸ್ತಕಗಳು ಗಳಿಸಿದ ಸಾಕ್ಷರತೆಯನ್ನು ಮರೆಯದಂತೆ ರಕ್ಷಿಸುವುವು.

ನೂತನ ಸಾಕ್ಷರರಿಗೆ ಸಾಹಿತ್ಯ ರಚಿಸುವ ವಿಷಯದಲ್ಲಿ ಒಂದು ವಿಚಾರಸಂಕಿರಣ ನಡೆಯಿತು. ಅದು ನಡೆದಿದ್ದು 1952 ರಲ್ಲಿ. ದೆಹಲಿಯ ಹತ್ತಿರ ಇರುವ ಓಕ್ಲಾ ಎಂಬಲ್ಲಿ. ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ಟಿ. ಮಾದಯ್ಯ ಗೌಡರು ಈ ಸಂಕಿರಣದ ನಿರ್ದೇಶಕರಾಗಿದ್ದರು. ಈ ಸಂಕಿರಣದಲ್ಲಿ ಹೊಸ ದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಸಾಹಿತ್ಯ ರಚಿಸುವ ಉದ್ಯಮ ವನ್ನು ಕುರಿತು ಕೆಲವು ನಿರ್ಧಾರಗಳನ್ನು ಕೈಕೊಂಡಿರುವರು. ಅವು ಈ ರೀತಿ ಇವೆ. ಮೂರು ಹಂತದಲ್ಲಿ ಪುಸ್ತಕಗಳನ್ನು ರಚಿಸಬೇಕು.

ಒಂದನೆಯ ಹಂತ : ಈ ಹಂತದಲ್ಲಿ ಹೊಸದಾಗಿ ಅಕ್ಷರಸ್ಥ ರಾದ ವಯಸ್ಕರು ಸರಳ ಪದಗಳನ್ನು ಓದಿ ಅರ್ಥಮಾಡಿಕೊಳ್ಳ ಬಲ್ಲರು. ಚಿಕ್ಕ ಚಿಕ್ಕ ವಾಕ್ಯಗಳನ್ನು ಓದಿ ಅರ್ಥ ಗ್ರಹಿಸಬಲ್ಲರು. ಅವರಿಗೆ ಕೆಳಗೆ ಕಂಡ ನಿಯಮಗಳನ್ನು ಅನುಸರಿಸಿ ಸಾಹಿತ್ಯ ರಚಿಸ ಬಹುದು.

1) ಓದುಗರಿಗೆ ಪರಿಚಯವಿರುವ ವಸ್ತುವಿನ ಆಯ್ಕೆ.

2) ರೀಡಿಂಗ್ ಕಾರ್ಡು, ಮಡಿಕೆ ಹಾಳೆ ಮುಂತಾದು ವನ್ನು ವಿವಿಧ ವಿಷಯಗಳ ಮೇಲೆ ರಚಿಸಬಹುದು.

---

1 ಹೊಸದಾಗಿ ಓದು ಕಲಿತ ವಯಸ್ಕರು ವಾಚನ ಶಕ್ತಿಯನ್ನು ಬಲಪಡಿಸಿಕೊಳ್ಳಲು ಅನುಕೂಲವಾದ, ಅವರಿಗಾಗಿಯೇ ಬರೆದ ಪುಸ್ತಕಗಳು.

3) ಪದಸಂಪತ್ತು : ಅತ್ಯಂತ ಹೆಚ್ಚು ಬಳಕೆಯಲ್ಲಿರುವ 500 ಪದಗಳನ್ನೇ ಉಪಯೋಗಿಸಬೇಕು.

4) ಒತ್ತಕ್ಷರ, ಸಂಧಿ ಮತ್ತು ಸಮಾಸಗಳನ್ನು ಆದಷ್ಟು ಬಿಡಬೇಕು.

5) ಪರಿಚಯವಿರುವ ಚಿಕ್ಕ ಚಿಕ್ಕ ಪದಗಳು, ವಾಕ್ಯದಲ್ಲಿ ಸರಾಸರಿ 5 ಪದಗಳಿಗಿಂತ ಹೆಚ್ಚಾಗಿ ಇರಬಾರದು.

6) ವಿಷಯಕ್ಕಿಂತ ಹೆಚ್ಚಾಗಿ ಚಿತ್ರಗಳಿರಬೇಕು. ಪುಸ್ತಕದಲ್ಲಿ ಮುಕ್ಕಾಲು ಭಾಗ ಚಿತ್ರ ಇರಬೇಕು.

7) ಪುಸ್ತಕದ ಮಧ್ಯಭಾಗದಲ್ಲಿ ಹೊಲಿಗೆ ಇರಬೇಕು.

8) ಮುದ್ರಣ 36 ಪಾಯಿಂಟಿನಿಂದ ಪ್ರಾರಂಭವಾಗಿ 16 ಪಾಯಿಂಟಿಗೆ (ಮೂರು ಹಂತಗಳಲ್ಲಿ) ಇಳಿಸಬಹುದು.

9) ಅಳತೆ (Royal quarto)

ಎರಡನೆಯ ಹಂತ : ಈ ಹಂತದಲ್ಲಿ ವಯಸ್ಕರು ಪದಗುಚ್ಛಗಳನ್ನು ಹಾಗೂ ಸಣ್ಣ ಸಣ್ಣ ವಾಕ್ಯಗಳನ್ನು ಓದಿ ಅರ್ಥಮಾಡಿಕೊಳ್ಳಬಲ್ಲರು.

1) ಎರಡು ಮತ್ತು ಮೂರನೆಯ ಹಂತಗಳಿಗೆ ವಸ್ತು ವ್ಯತ್ಯಾಸವೇನಿಲ್ಲ.

2) ಪುಸ್ತಕವು ಒಂದು ಗೊತ್ತಾದ ವಿಷಯ ಕುರಿತು ಇರಬಹುದು. ಇಲ್ಲವೇ ಸಂಕೀರ್ಣ ಸಂಪುಟ ಆಗಬಹುದು.

3) ಪದಸಂಪತ್ತು : 1000 ಪದಗಳಿಗೆ ಮೀರಿರಬಾರದು.

4) ಸಾಧ್ಯವಾದಷ್ಟು ಒತ್ತಕ್ಷರ ಮತ್ತು ಸಂಧಿ ಸಮಾಸಗಳನ್ನು ಬಿಡುವುದು ಒಳಿತು.

5) ಪರಿಚಯವಿರುವ ಪದಗಳ ಬಳಕೆ. ಹೊಸಪದಗಳ

ಪುನರಾವೃತ್ತಿ.

6) ಸಮ್ಮಿಶ್ರ ವಾಕ್ಯಗಳಿರಬಾರದು.

7) ಪುಸ್ತಕದ ಮೊದಲ ಅರ್ಧಭಾಗದಲ್ಲಿ $^2/_3$ ಭಾಗ ಮಾತ್ರ ಚಿತ್ರಗಳಿಗೆ ಮೀಸಲಾಗಿರಬೇಕು. ಉಳಿದ ಅರ್ಧ ಭಾಗದಲ್ಲಿ ಪ್ರತಿ ಎರಡನೇ ಪುಟದಲ್ಲಿ ಚಿತ್ರವಿರಬೇಕು.

8) ಪುಸ್ತಕದ ಮಧ್ಯದಲ್ಲಿ ಹೊಲಿಗೆ ಇರಬೇಕು.

9) ಫೂಲ್‌ಸ್ಕೇಪ್ ಚೌಪತ್ರ(Foolscape quarto)

ಮೂರನೆಯ ಹಂತ: ವಿವಿಧ ವಿಷಯಗಳನ್ನು ಒಳಗೊಂಡ ಪುಸ್ತಕಗಳನ್ನು ಓದಬಲ್ಲನು. ಈ ಮಟ್ಟದಲ್ಲಿ ಅವನಿಗೆ ಗಳಿಸಿದ ಸಾಕ್ಷರತೆ ಉಳಿಯಲು ಸಹಾಯಕವಾಗಬೇಕು. ಹೆಚ್ಚಿನ ಜ್ಞಾನ ಸಂಗ್ರಹ ಆಗಬೇಕು. ಹಾಗೂ ಮನರಂಜನೆಯನ್ನು ಉಂಟು ಮಾಡಬೇಕು. ಮೂರು ಹಂತಗಳಲ್ಲೂ ಸಹ ವಯಸ್ಕರ ಆಸಕ್ತಿಗೆ ಅನುಗುಣವಾದ ವಿಷಯ ಇರಬೇಕು.

1) ವಯಸ್ಕರಿಗೆ ಪರಿಚಯವಾದ ವಸ್ತುವಿನ ಬಗ್ಗೆ ಹೊಸ ವಿಷಯಗಳನ್ನು ತಿಳಿಸಬೇಕು.

2) ಯಾವುದಾದರೂ ಒಂದು ನಿರ್ದಿಷ್ಟ ವಿಷಯದ ಬಗ್ಗೆ ಬರೆಯಬೇಕು.

3) ಪದಸಂಪತ್ತು: 2000 ಪದಗಳಿಗೆ ಮೀರಬಾರದು.

4) ಸರಳವಾದ ಒತ್ತಕ್ಷರಗಳ ಬಳಕೆ, ಸಮ್ಮಿಶ್ರ ವಾಕ್ಯಗಳನ್ನು ಇತಿಮಿತಿಯಲ್ಲಿ ಬಳಸುವುದು.

5) ಎರಡು ಮತ್ತು ಮೂರನೇ ಹಂತದ ಪುಸ್ತಕಗಳಲ್ಲಿ ವಾಕ್ಯದ ಉದ್ದ ಸರಾಸರಿ 10 ಪದಗಳಿಗೆ ಮೀರಬಾರದು. ಹೊಸ

ಪದಗಳ ಬಳಿಕೆ ಶೇಕಡ 2 ಕಿಂತ ಹೆಚ್ಚಿಗೆ ಇರುವುದು ಒಳಿತಲ್ಲ.

6) ಮುದ್ರಣ 16 ಪಾಯಿಂಟು ಇರಬಹುದು. ಈ ವೇಳೆಗಾಗಲೇ ಕಣ್ಣು ಓದುವ ಹವ್ಯಾಸಕ್ಕೆ ಹೊಂದಿಕೊಂಡಿರುವುದು.

7) ಚಿತ್ರಗಳು ಪುಸ್ತಕದ 1/4 ಭಾಗ ಇರಬೇಕು. ಅವುಗಳನ್ನು ಸೂಕ್ತವಾದ ಕಡೆಗಳಲ್ಲಿ ಜೋಡಿಸಬೇಕು.

8) ಹೊಲಿಗೆ ಪುಸ್ತಕದ ಮಧ್ಯದಲ್ಲಿ ಇಲ್ಲವೆ ಪುಸ್ತಕದ ಪಕ್ಕಕ್ಕೆ ಇರಬೇಕು.

ತಾಂತ್ರಿಕರು ಪಠ್ಯಪುಸ್ತಕಗಳನ್ನು ರಚಿಸಲು ಶಾಸ್ತ್ರೀಯವಾದ ಕೆಲವು ಕ್ರಮಗಳನ್ನು ಅನುಸರಿಸುವರು. ಹೀಗೆ ಶಾಸ್ತ್ರೀಯವಾಗಿ ರಚಿತವಾದ ಪಠ ಪುಸ್ತಕಗಳಿಗೂ ಅನುಭವ ಇಲ್ಲದವರು ವಯಸ್ಕರಿಗೆ ರಚಿಸುವ ವಿದ್ಯಾಮಂದಿರದ ಪುಸ್ತಕಗಳಿಗೂ ಬಹಳ ಅಂತರವಿರುವುದಾಗಿ 1968 ರಲ್ಲಿ ಬ್ಯಾಂಕಾಕಿನಲ್ಲಿ ನಡೆದ ಕ್ರಿಯಾತ್ಮಕ ಸಾಕ್ಷಾರತಾ ತಜ್ಞರ ಸಮ್ಮೇಳನ ಅಭಿಪ್ರಾಯ ತಾಳಿತು. ಆದ್ದರಿಂದ ರಚಿಸುವ ವಿದ್ಯಾಮಂದಿರದ ಪುಸ್ತಕಗಳು ಸಹ ಶಾಸ್ತ್ರಸಮ್ಮತವಾಗಿರಬೇಕು. ಆಗ ಓದುಗಾರಿಕೆಯನ್ನು ಯಶಸ್ವಿಯಾಗಿ ಮುದುವರಿಸಲು ಅನುಕೂಲ.

ಓದುವುದು ಕೇವಲ ಯಾಂತ್ರಿಕವಾದ ಕಾರ್ಯವಲ್ಲ. ಅದು ಒಂದು ಕಲೆ. ಓದುವ ಕ್ರಿಯೆಯಲ್ಲಿ ಸ್ಮರಣಶಕ್ತಿ, ವಿವೇಚನಾಶಕ್ತಿ, ತುಲನಾಶಕ್ತಿ, ಸಮಸ್ಯಾಪರಿಹಾರ ಮತ್ತು ಜೀವನದಲ್ಲಿ ಪ್ರಯೋಗ ಈ ಕೆಲವು ಹಂತಗಳಿವೆ. ಓದುವುದು ಒಂದು ಚಟುವಟಿಕೆ. ಈ ಚಟುವಟಿಕೆಯಲ್ಲಿ ಮೂರು ಹಂತಗಳಿವೆ. (1) ಓದುವುದು. (2) ಅರ್ಥಗ್ರಹಣ (3) ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದು–ಅಂದರೆ ಬರವಣಿಗೆಯಲ್ಲಿನ ಅಂಶಗಳನ್ನು ಒಪ್ಪಿಕೊಳ್ಳುವುದು; ಇಲ್ಲವೆ

ಸಕಾರಣವಾಗಿ ತಿರಸ್ಕರಿಸುವುದು ಅಥವಾ ಜೀವನದಲ್ಲಿ ಆಚರಣೆಗೆ ತರುವುದು.

ಹೊಸದಾಗಿ ಓದು ಬರಹ ಕಲಿತಿರುವ ವಯಸ್ಕನ ಓದುವ ಕ್ರಿಯೆ ಯಾವ ರೀತಿ ನಡೆಯುವುದು? ಓದುಗನ ಕಣ್ಣಿಗೆ ಪದ ಇಲ್ಲವೇ ಪದಗಳ ಗುಂಪು ಬೀಳುವುದು. ಅನಂತರ ಅವುಗಳ ಅರ್ಥ ಗ್ರಹಣ ಆಗುವುದು. ಪ್ರಾರಂಭದಲ್ಲಿ ಕಣ್ಣುಗಳು ಪರಿಚಿತ ಪದಗಳನ್ನು ಹುಡುಕುವುವು. ಅಪರಿಚಿತವಾದ ಪದಗಳನ್ನು ಕಂಡಲ್ಲಿ ಕಣ್ಣುಗಳು ಹಿಂದಕ್ಕೆ ಚಲಿಸುವುವು. ಅರ್ಥವಾಗದಂತಹ ಪದಗಳು ದೃಷ್ಟಿಗೆ ಗೋಚರವಾದಾಗ ಕಣ್ಣಿನ ಓಟ ಹಿಂದಕ್ಕೆ ಮತ್ತು ಮುಂದಕ್ಕೆ ಹೆಚ್ಚಾಗಿ ಚಲಿಸುವುದು. ಓದುವ ಅಭ್ಯಾಸ ಬೆಳೆದಂತೆ ಕಣ್ಣಿನ ಚಲನೆ ಹಿಮ್ಮೆಟ್ಟುವ ಸಂದರ್ಭಗಳು ಕಡಮೆ. ಕಣ್ಣಿನ ನಿಲುಗಡೆ ಕಡಮೆ ಆದಷ್ಟು ಓದುಗಾರಿಕೆ ಸುಧಾರಿಸುವುದು. ಆದ್ದರಿಂದ ಓದುಗಾರಿಕೆ ತೃಪ್ತಿಕರವಾಗಬೇಕಾದರೆ ಓದುವವನ ಅರ್ಥಗ್ರಹಣ, ಪದಸಂಪತ್ತು ಮತ್ತು ಭಾಷಾನುಭವದ ಮುನ್ನಡೆ–ಇವುಗಳಿಗೆ ಅನುಗುಣವಾಗಿ ಬರಹ ಇರಬೇಕು. ಡಬ್ಲ್ಯು.ಎಸ್. ಗ್ರೇ ಎಂಬ ಶಿಕ್ಷಣ ತಜ್ಞರು ಓದುಗರ ಕಣ್ಣಿನ ಚಲನೆಯನ್ನು ಛಾಯಾಚಿತ್ರ ತೆಗೆದಿರುವರು. ತಮ್ಮ ಪ್ರಯೋಗಾಲಯದಲ್ಲಿ ಓದುಗರು ವಿವಿಧ ಭಾಷೆಗಳನ್ನು ಓದುವಾಗ ಕಣ್ಣಿನ ಚಲನೆಯನ್ನು ಛಾಯಾಚಿತ್ರ ತೆಗೆದಿರುವರು. ಈ ಪ್ರಯೋಗ ಇಂಗ್ಲಿಷ್, ಫ್ರೆಂಚ್, ಥೈ, ಸ್ಪ್ಯಾನಿಷ್, ಹಿಂದಿ, ಉರ್ದು ಮತ್ತು ಜಪಾನಿ ಮುಂತಾದ ಭಾಷೆಗಳಲ್ಲಿ ನಡೆದಿರುವುದು.

ಬರವಣಿಗೆ ಒಂದು ಕಲೆ. ಈ ಕಲೆ ದೈವದತ್ತವಾದುದು ಎಂದು ಕೆಲವರ ಭಾವನೆ. ಈ ಕಲೆಯನ್ನು ಜೀವನದಲ್ಲಿ ಅಭ್ಯಾಸ

ಮಾಡಿ ಸಾಧಿಸಬಹುದು ಎಂಬುದಾಗಿ ಕೆಲವರ ಕಲ್ಪನೆ. ಈ ಕಲೆ ಹುಟ್ಟಿನೊಡನೆ ಬರುವುದು, ಅಲ್ಲದೆ ಸಾಧನೆಯಿಂದಲೂ ಸಾಧ್ಯ ಎಂಬುದಾಗಿ ಬೆನ್‌ಜಾನ್ಸನ್ ತಿಳಿಸಿರುವನು. ನಮ್ಮ ಬರಹ ಇನ್ನೊಬ್ಬರು ಓದಿ ಅರ್ಥಮಾಡಿಕೊಳ್ಳುವಂತಿರಬೇಕು. ಇದಕ್ಕೆ ವಾಚನಶಕ್ತಿ ಎಂದು ಹೆಸರು. ಬರೆದ ಪುಸ್ತಕ ಅಥವ ಲೇಖನ ಓದುಗರು ಅರ್ಥಮಾಡಿಕೊಳ್ಳಲು ಆಗದಿದ್ದರೆ ಆ ಸಾಹಿತ್ಯ ನಿರರ್ಥಕ. ಅದಕ್ಕಾಗಿ ವಿನಿಯೋಗ ಮಾಡಿದ ಶ್ರಮವ್ಯರ್ಥ.

ವಾಚನಶಕ್ತಿಯನ್ನು ಅಳೆಯಲು ಅನೇಕ ಸಂಶೋಧನೆಗಳು ಅಮೆರಿಕದಲ್ಲಿ ನಡೆದಿವೆ. ಹೆಚ್ಚಾಗಿ ಇಂಗ್ಲಿಷ್ ಮತ್ತು ಸ್ಪ್ಯಾನಿಷ್ ಭಾಷೆಗಳಲ್ಲಿ ಈ ಪ್ರಯೋಗಗಳು ನಡೆದಿವೆ. ಜೊತೆಗೆ ಬರಹ ಯಾವ ರೀತಿ ಇರಬೇಕು ಎಂಬ ಬಗ್ಗೆ ಕೆಲವು ಸೂತ್ರಗಳನ್ನು ಗೊತ್ತುಮಾಡಿರುವರು. ಈ ಸೂತ್ರಗಳು ಬರಹಗಾರರಿಗೆ ದಾರಿ ದೀವಿಗೆಗಳು ಮಾತ್ರ. ಆದರೆ ಬರವಣಿಗೆಯನ್ನು ನಿರ್ದೇಶಿಸುವ ರೂಢಿ ಮೂಲ ತಾತ್ವಿಕಾಂಶಗಳಲ್ಲ. ಬರೆದಿದ್ದನ್ನು ಹೆಚ್ಚು ಸಾರಿ ತಿದ್ದಿ ಬರೆಯುವುದರಿಂದ ಒಳ್ಳೆಯ ಬರಹ ಸಾಧ್ಯ.

ಬರವಣಿಗೆ ಯಾರಿಗಾಗಿ? ಓದುಗರಿಗಾಗಿಯೇ ಅಲ್ಲವೇ? ಗ್ರಂಥಕರ್ತನ ಬರಹವನ್ನು ಓದುಗರು ಅರ್ಥ ಮಾಡಿಕೊಳ್ಳಲು ಸಾಧ್ಯ ಆಗದಿದ್ದಲ್ಲಿ ಆತನ ಶ್ರಮ ವ್ಯರ್ಥವಾದಂತೆ. ಆದ್ದರಿಂದ ಕೆಳಗೆ ಸೂಚಿಸಿರುವ ವಾಚನ ಸೂತ್ರಗಳನ್ನು ಬರಹಗಾರನು ಸಾಧ್ಯ ವಾದಷ್ಟು ತನ್ನ ಗಮನದಲ್ಲಿ ಇಟ್ಟುಕೊಳ್ಳಬೇಕಾದುದು ಅಗತ್ಯ.

1) ವಿಷಯ ನಂಬಲು ಅರ್ಹವಾಗಿ ಅಧಿಕೃತವಾಗಿರ ಬೇಕು. ಸಂದೇಹಕ್ಕೆ ಎಡೆಯಿಲ್ಲದ ಸ್ಪಷ್ಟವಾದ ನಿರೂಪಣೆ.

2) ವಾಕ್ಯಗಳು ಚಿಕ್ಕವಾಗಿರಬೇಕು.

3) ಬರೆದುದು ಸರಳ ವಾಕ್ಯಗಳಿಂದ ಕೂಡಿರಬೇಕು. ಸಾಧ್ಯವಾದಷ್ಟು ಸಮ್ಮಿಶ್ರ ವಾಕ್ಯಗಳನ್ನು ಕಡಮೆ ಮಾಡಬೇಕು.

4) ಪರಿಚಯವಾಗಿರುವ ಪದಗಳ ಬಳಕೆ ಹೆಚ್ಚಾಗಿರಬೇಕು.

5) ಅನಾವಶ್ಯಕ ಪದಗಳನ್ನು ಬಿಡುವುದು.

6) ಸತ್ವಶಾಲಿಯಾದ ಕ್ರಿಯಾಪದದ ಬಳಕೆ.

7) ಕಣ್ಣಿಗೆ ಕಟ್ಟುವಂತಹ ಪದಗಳ ಬಳಕೆ.

8) ಮಾತನಾಡುವಂತೆ ಬರವಣಿಗೆ ಇದ್ದರೆ ಮೇಲು.

9) ಹಾಲಿ ಓದುಗನ ಅನುಭವದ ಹಿನ್ನೆಲೆಯಲ್ಲಿ ಬರವಣಿಗೆ ಕೈಕೊಳ್ಳಬೇಕು.

10) ಬರವಣಿಗೆಯಲ್ಲಿ ವೈವಿಧ್ಯತೆ ಇರಬೇಕು.

11) ಬರಹ ಅಭಿವ್ಯಕ್ತಿಯ ಮಾಧ್ಯಮವಾಗಿರಬೇಕು. ಪ್ರಭಾವಮುದ್ರೆ ಇರಬಾರದು.

12) ನೀತಿಬೋಧೆ ಮಾಡುವುದಕ್ಕಿಂತ ಹೆಚ್ಚಾಗಿ ನೀತಿವಂತನಾದ ಒಬ್ಬ ವ್ಯಕ್ತಿಯನ್ನೇ ಕುರಿತು ಬರೆಯುವುದು ಮೇಲು.

1) ಬರಹಗಾರರು ಭಾವಿ ಓದುಗರನ್ನು ದೃಷ್ಟಿಯಲ್ಲಿ ಇಟ್ಟುಕೊಳ್ಳುವುದು ಒಳ್ಳೆಯದು. ಬರಹಗಾರರ ಮತ್ತು ಓದುಗರ ಸಂಬಂಧ ಹತ್ತಿರವಾದಷ್ಟೂ ಉಭಯತ್ರರಿಗೂ ಅನುಕೂಲ. ವಯಸ್ಕರ ವಾಚನಾಭಿರುಚಿಯನ್ನು ಅನುಸರಿಸಿ ವಸ್ತುವಿನ ಆಯ್ಕೆ ಮಾಡುವುದು ಅಗತ್ಯ. ಬರೆಯುವ ಪುಸ್ತಕ ಹೊಸದಾಗಿ ಅಕ್ಷರ ಕಲಿತ ವಯಸ್ಕರಿಗೇನೋ ಹೌದು. ಆತನಿಗೆ ಪ್ರಪಂಚದ ಅನುಭವ ಇದೆ. ಜೊತೆಗೆ ವಸ್ತುವಿನ ಬಗ್ಗೆ ಆತನಿಗೆ ಸ್ವಲ್ಪ ವಿಷಯ ತಿಳಿದಿರಬಹುದು. ಆದ್ದರಿಂದ ಆತ ತಿಳಿದಿದ್ದನ್ನೇ ಹೇಳಿದಲ್ಲಿ ಪುನರುಕ್ತಿ ಆಗುವುದು. ಮೇಲಾಗಿ ಅಂತಹ ಪುಸ್ತಕಗಳನ್ನು ಓದಲು ವಯಸ್ಕ

ಸಿಗೆ ಕುತೂಹಲ ಮೂಡದಿರಬಹುದು. ಈಗಾಗಲೇ ಗೊತ್ತಿರುವ ವಿಷಯಗಳನ್ನು ಬಿಟ್ಟು ಹೊಸ ವಿಷಯಗಳನ್ನು ಹೇಳಬೇಕು. ಇಲ್ಲವೆ ಆತನಿಗೆ ಗೊತ್ತಿರುವ ವಿಷಯಗಳಲ್ಲಿ ತಪ್ಪು ಭಾವನೆಗಳು ಇದ್ದರೆ ಅವುಗಳ ಬಗ್ಗೆ ಸರಿಯಾದ ಅಧಿಕೃತ ವಿಷಯಗಳನ್ನು ತಿಳಿಸಬೇಕು. ಅಲ್ಲದೆ ಅವನ ಸಂದೇಹಗಳನ್ನು ಹೋಗಲಾಡಿಸಬೇಕು. ತಾಂತ್ರಿಕ ವಿಷಯಗಳ ಮೇಲೆ ಪುಸ್ತಕ ಬರೆಯುವುದಾದರೆ ಸಂಬಂಧಪಟ್ಟ ತಾಂತ್ರಿಕರನ್ನು ಭೇಟಿ ಮಾಡಿ ಅವರಿಂದ ಸೂಕ್ತ ಮಾಹಿತಿಗಳನ್ನು ಸಂಗ್ರಹಿಸಬೇಕು. ಜೊತೆಗೆ ಅವರು ಸೂಚಿಸುವ ಆಧಾರಿತ ಗ್ರಂಥಗಳ ಅವಲೋಕನ ಅಗತ್ಯ. ಈ ರೀತಿ ವಿಷಯ ಸಂಗ್ರಹ ಮಾಡಿದ ನಂತರ ಬರಹಗಾರ ಪ್ರಥಮ ಕರಡು ಪ್ರತಿಯನ್ನು ತಯಾರಿಸಬೇಕು ನಂತರ ಆ ಕರಡು ಪ್ರತಿಯನ್ನು ಮೊದಲ ಬಾರಿಗೆ ಕಂಡ ತಾಂತ್ರಿಕರ ಹತ್ತಿರ ತೆಗೆದುಕೊಂಡು ಹೋಗಿ ಅವರ ಅಭಿಪ್ರಾಯವನ್ನು ಪಡೆಯುವುದು ಅನಿವಾರ್ಯ. ಇದರಿಂದ ವಿಷಯ ಸಂದೇಹಕ್ಕೆ ಎಡೆಯಿಲ್ಲದೆ ಆಧಾರ ಸಹಿತವಾಗಿರುವುದು. ಕರಡು ಪ್ರತಿಯಲ್ಲಿ ತಾಂತ್ರಿಕರು ಸೂಚಿಸುವ ಬದಲಾವಣೆಗಳನ್ನು ಮಾಡುವುದು ಆಗತ್ಯ. ಆನಂತರ ಆ ಪ್ರತಿಯನ್ನು ಭಾವಿ ಓದುಗರ ಮುಂದೆ ಓದಬೇಕು. ಹೀಗೆ ಮಾಡುವುದರಿಂದ ಬರವಣಿಗೆ ಓದುಗರ ದೃಷ್ಟಿಯಲ್ಲಿ ಎಷ್ಟರಮಟ್ಟಿಗೆ ಸಮರ್ಪಕವಾಗಿದೆ? ಹೊಸ ವಿಷಯಗಳು ಏನಿವೆ? ವಿಷಯಗಳು ಸಮಂಜಸವಾಗಿವೆಯೆ? ಉತ್ತಮಪಡಿಸುವುದು ಅಗತ್ಯವೆ? ಈ ಅಂಶಗಳು ನಿರ್ಧಾರವಾಗುವುವು.

ಉದಾಹರಣೆಗೆ 1967ನೇ ಸಾಲಿನಲ್ಲಿ ಮೈಸೂರಿನ ಮಾನಸಗಂಗೋತ್ರಿಯಲ್ಲಿ ಸಾಹಿತ್ಯ ರಚನಾಲಯ ನಡೆಯಿತು. "ಅಪಾಯ ತಪ್ಪಿಸುವ ಉಪಾಯ" ಎಂಬುದು ಅಲ್ಲಿ ರಚಿತವಾದ ಪುಸ್ತಕ.

ವಿಷಯ ಹೀಗೆ ಬೆಳೆದಿದೆ. ನಾಗಮ್ಮನ ಚಿಕ್ಕಮಗು ಒಂದೇ, ಅಡಿಗೆ ಮನೆಯಲ್ಲಿ. ನಾಗಮ್ಮ ನೀರನ್ನು ತರಲು ಹೋಗಿದ್ದಾಳೆ. ಗ್ರಹ ಚಾರ! ಮಗು ಕುದಿಯುವ ಬೇಳೆ ನೀರನ್ನು ಮೈಮೇಲೆ ಚೆಲ್ಲಿ ಕೊಂಡಿದೆ. ನಾಗಮ್ಮ ಮಗುವನ್ನು ಕರೆದುಕೊಂಡು ಆಸ್ಪತ್ರೆಗೆ ಬಂದಳು. ಮಗುವನ್ನು ವೈದ್ಯರಿಗೆ ತೋರಿಸಿದಳು. "ನಿಮ್ಮ ಮಗುವನ್ನು ಎರಡು ದಿನ ಆಸ್ಪತ್ರೆಯಲ್ಲಿಡಿ. ಒಳಗೆ ಬನ್ನಿ. ಹಾಗೆಂದು ಒಳಕ್ಕೆ ಕರೆದುಕೊಂಡು ಹೋದರು" ಹಾಸಿಗೆಯಲ್ಲಿ ಮಲಗಿದ್ದ ರೋಗಿಗಳ ಪರಿಚಯ ಮಾಡಿಸಲು ಡಾಕ್ಟರು ಪ್ರಾರಂಭಿಸಿದರು. ಏತನ್ಮಧ್ಯೆ ಮಗುವಿಗೆ ವೈದ್ಯೋಪಚಾರವನ್ನೇ ಮಾಡಲಿಲ್ಲ. ರೋಗಿ ಬಂದಾಗ ಆತನನ್ನು ಕೂಡಲೇ ಪರೀಕ್ಷಿಸಿ ವೈದ್ಯೋಪಚಾರ ಮಾಡದೆ ಇತರೇ ರೋಗಿಗಳ ಪರಿಚಯ ಮಾಡಿಸಲು ಡಾಕ್ಟರು ಮಾಡಿದ ಪ್ರಯತ್ನ ಸಮಂಜಸವಾದ ಸನ್ನಿವೇಶವಲ್ಲ. ಈ ಕೊರತೆ ಯನ್ನು ಸಾಮಾನ್ಯ ಓದುಗನು ಕೂಡಲೇ ಗುರುತಿಸಬಲ್ಲನು. ಆದ್ದ ರಿಂದ ಇಂತಹ ನ್ಯೂನತೆಗಳಿಗೆ ಅವಕಾಶ ಇರಬಾರದು. ಹಾಗಾದ ದಿರಲು ಕರಡು ಪ್ರತಿಯನ್ನು ಭಾವಿ ಓದುಗರ ಮುಂದೆ ಓದುವುದು ಒಳ್ಳೆಯದು. ಆಗ ಇಂತಹ ಆಭಾಸ ಪ್ರಸಂಗಗಳು ಕಡಿಮೆಯಾಗು ವುವು.

ಕೋಳಿ ಸಾಕಣೆಯ ಬಗ್ಗೆ ಒಂದು ಪುಸ್ತಕ ಬರೆಯಬೇಕು ಎನ್ನೋಣ. ಹಳ್ಳಿಗಾಡಿನ ರೈತನಿಗೆ ಕೋಳಿಸಾಕಣೆ ಪರಿಚಿತ ವಾದ ಕಸಬು. ಆದರೆ ಅವನು ಅನುಸರಿಸುವ ಪದ್ಧತಿ ಹಿಂದಿ ನದು. ಹೊಸ ಡೀಪ್ ಲೀಟರ್ ಪದ್ಧತಿ ಹೇಳಿದರೆ ಅವನು ಸುಲಭ ವಾಗಿ ಒಪ್ಪನು. ಕೋಳಿ ಮರಿಗಳನ್ನು ಹೊರಗೆ ಬಿಡಬಾರದು ಎಂದು ಹೇಳಿದರೆ ಅವನಿಗೆ ಒಪ್ಪಿಗೆ ಆಗದು. ಜೊತೆಗೆ ನೀರಿನ

ಕೋಳಿಗಳನ್ನು ಸಾಕಿದರೆ ಮನೆ ಊರ್ಜಿತವಾಗುವುದಿಲ್ಲ ಎಂಬ ತಪ್ಪು ಕಲ್ಪನೆ ಆತನಲ್ಲಿ ಇರುವುದು. ಆದ್ದರಿಂದ ಇಂತಹ ಭಾವನೆಗಳು ತಪ್ಪು ಎಂಬುದನ್ನು ಸಕಾರಣವಾಗಿ ನಿದರ್ಶನಗಳೊಡನೆ ತೋರಿಸಿ, ಪರಿಣಾಮಕಾರಿಯಾದ ಭಾಷೆಯಲ್ಲಿ ಆ ವಿಷಯಗಳನ್ನು ಕುರಿತು ಬರೆಯಬೇಕು.

2 ಮತ್ತು 3. ವಾಕ್ಯಗಳು ಚಿಕ್ಕವು ಮತ್ತು ಸರಳವು ಆಗಿರಬೇಕು.

ಕೆಲವು ವೇಳೆ ಬರವಣಿಗೆಯಲ್ಲಿ ಭಾಷೆ ಕ್ಲಿಷ್ಟವಾಗಿರಬಹುದು. ಆಗ ಓದುಗನಿಗೆ ವಿಷಯ ಅರ್ಥವಾಗದು. ಅರ್ಥಮಾಡಿಕೊಳ್ಳಲು ಕಾಲ ವ್ಯಯವಾಗುವುದು. ಹೊಸದಾಗಿ ಅಕ್ಷರಸ್ಥನಾದ ವಯಸ್ಕ ಓದುಗನಿಗೆ ಅಷ್ಟೊಂದು ಕಾಲ ವಿನಿಯೋಗಿಸಲು ತಾಳ್ಮೆ ಇರಲಾರದು. ಕ್ಲಿಷ್ಟವಾದ ಭಾಷಾ ಪ್ರಯೋಗ ಪಾಂಡಿತ್ಯದ ಕುರುಹು ಎಂಬುದು ಕೆಲವರ ಭಾವನೆ. ಆದರೆ ಭಾವಿ ಓದುಗನ ದೃಷ್ಟಿಯಿಂದ ಭಾಷಾ ಪಾಂಡಿತ್ಯ ನಿಷ್ಪ್ರಯೋಜಕ. ಆದ್ದರಿಂದ ವಾಕ್ಯಗಳು ಚಿಕ್ಕವಾಗಿರಬೇಕು. ಅಮೆರಿಕ ದೇಶದಲ್ಲಿ ವಾಕ್ಯಗಳ ಉದ್ದದ ಬಗ್ಗೆ ಸಂಶೋಧನೆ ನಡೆಸಿರುವರು. 1890ರಲ್ಲಿ ನೆಬ್ರಾಸ್ಕ ವಿಶ್ವವಿದ್ಯಾನಿಲಯದ ಡಾ|| ಎಲ್. ಎ. ಶರ್ಮಾನ್ ಅವರು ಆಂಗ್ಲೇಯ ಬರಹಗಾರರ ಪುಸ್ತಕಗಳಲ್ಲಿ ವಾಕ್ಯಗಳ ಸರಾಸರಿ ಉದ್ದವನ್ನು ಕಂಡು ಹಿಡಿಯಲು ಪ್ರಯತ್ನ ಮಾಡಿದರು. ಆ ವಾಕ್ಯಗಳಲ್ಲಿ ಉಪಯೋಗ ಮಾಡಿರುವ ಸರಾಸರಿ ಪದಗಳ ಸಂಖ್ಯೆಯನ್ನು ಕೆಳಗೆ ಕೊಟ್ಟಿದೆ.

| ಗ್ರಂಥಕರ್ತನ ಹೆಸರು | ಸರಾಸರಿ ಪದಗಳು |
|---|---|
| ಮಿಲ್ಟನ್ ಅವರ ಗದ್ಯ | 60.80 ಪದಗಳು |
| ಡೀಫೋ | 49.82 ,, |
| ಸ್ಪೆನ್ಸರ್ | 68.00 ,, |
| ಥಾಮಸ್ ಮೋರ್ | 52.00 ,, |
| ಡ್ರೈಡನ್ | 45.26 ,, |
| ಥಾಮಸ್ ಬೇಕನ್ | 20.00 ,, |

1890ರ ಕಾಲದಲ್ಲಿ ವಾಕ್ಯಗಳಲ್ಲಿ ಸರಾಸರಿ 20 ಪದಗಳಿದ್ದವು. ವಾಕ್ಯಗಳ ಉದ್ದ ಎಷ್ಟಿರಬೇಕು? ಅಂದರೆ ವಾಕ್ಯಗಳಲ್ಲಿ ಸರಾಸರಿ ಎಷ್ಟು ಪದಗಳಿರಬೇಕು?

ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಬರೆಯುವ ಸಾಹಿತ್ಯದಲ್ಲಿ ವಾಕ್ಯಗಳ ಉದ್ದ 5ರಿಂದ 10 ಪದಗಳಿಗೆ ಮೀರಿರಬಾರದು ಎಂಬುದನ್ನು ಹಿಂದೆಯೇ ತಿಳಿಸಿದೆ. ವಾಕ್ಯಗಳು ಸರಳವಾಗಿರಬೇಕು. ಉದಾಹರಣೆಗೆ "ಈಗಲೂ ನಾವು ನೋಡುವ ಕೆರೆ, ಕುಂಟೆ, ಭಾವಿ, ತೋಪು ಮತ್ತು ದೇವಾಲಯ ಮುಂತಾದುವು ಯಾವ ಸರಕಾರದ ನೆರವೂ ಇಲ್ಲದೆ ಊರೊಟ್ಟಿನ ಕೆಲಸದಿಂದಲೇ ಆಗಿವೆ". ಈ ವಾಕ್ಯದಲ್ಲಿ 17 ಪದಗಳಿವೆ. ಇದನ್ನು ಎರಡು ವಾಕ್ಯಗಳನ್ನಾಗಿ ಮಾಡಬಹುದು. "ಈಗಲೂ ನಾವು ನೋಡುವ ಕೆರೆ, ಕುಂಟೆ, ಭಾವಿ, ತೋಪು ಮತ್ತು ದೇವಾಲಯ ಮುಂತಾದುವು ಊರೊಟ್ಟಿನ ಕೆಲಸದಿಂದಲೇ ಆಗಿವೆ. ಇವುಗಳಿಗೆ ಸರಕಾರ ಯಾವ ನೆರವನ್ನೂ ನೀಡಿಲ್ಲ." "ಇತ್ತೀಚೆಗೆ ಸಿಂಜೀ ರಸದಿಂದ ಅನೇಕ ಬಗೆಯ ರಾಸಾಯನಿಕ ದ್ರವಗಳೂ, ಸೌಂದರ್ಯವನ್ನು ಹೆಚ್ಚು ಮಾಡುವ ಸಾಮಗ್ರಿಗಳೂ ತಯಾರಾಗುತ್ತವೆ". ಈ ವಾಕ್ಯದಲ್ಲಿ

12 ಪದಗಳಿವೆ. ಇದನ್ನು ಎರಡು ವಾಕ್ಯಗಳನ್ನಾಗಿ ಮಾಡ ಬಹುದು. "ಇತ್ತೀಚೆಗೆ ನಿಂಬೇ ರಸದಿಂದ ಅನೇಕ ಬಗೆಯ ರಾಸಾ ಯನಿಕ ದ್ರವಗಳು ತಯಾರಾಗುತ್ತವೆ. ಅಲ್ಲದೆ ಸೌಂದರ್ಯವನ್ನು ಹೆಚ್ಚು ಮಾಡುವ ಸಾಮುಗ್ರಿಗಳು ಕೂಡ ತಯಾರಾಗುತ್ತವೆ." ವಾಕ್ಯಗಳಉದ್ದ ಬೆಳೆದಂತೆಲ್ಲಾ ಪದಗಳ ಗುಂಪೂ ಸಹ ಬೆಳೆಯು ವುದು. ಅವುಗಳ ಸಂಬಂಧ ಹೆಚ್ಚುವುದು. ತತ್ಪರಿಣಾಮವಾಗಿ ವಾಕ್ಯಗಳನ್ನು ಅರ್ಥಮಾಡಿಕೊಳ್ಳುವ ಮಾನಸಿಕ ಶ್ರಮ ಹೆಚ್ಚು ವುದು. ಈ ಶ್ರಮ ತಪ್ಪಿಸಲು ವಾಕ್ಯಗಳ ಉದ್ದವನ್ನು ಕಡಮೆ ಮಾಡ ಬೇಕು.

ಸಾಮಾನ್ಯವಾಗಿ ಉದಾತ್ತ ವ್ಯಕ್ತಿಗಳು ಮತ್ತು ಜ್ಞಾನಿಗಳು ತಮ್ಮ ಉದಾತ್ತ ಭಾವನೆಗಳನ್ನು ಜನಸಾಮಾನ್ಯರಿಗೆ ಅರ್ಥವಾಗು ವಂತೆ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ತಿಳಿಸುತ್ತಾರೆ. ಮಹಾತ್ಮ ಗಾಂಧಿ ಮತ್ತು ಚಕ್ರವರ್ತಿ ರಾಜಗೋಪಾಲಚಾರ್ಯರ ಬರಹಗಳೇ ಇದಕ್ಕೆ ಸಾಕ್ಷಿ. ಅಬ್ರಹಾಂ ಲಿಂಕನ್ ಸಹ ಚಿಕ್ಕ ಚಿಕ್ಕ ವಾಕ್ಯಗಳನ್ನು ಉಪಯೋಗ ಮಾಡುವ ರೂಢಿಯನ್ನು ಇಟ್ಟುಕೊಂಡಿದ್ದನು. ಸರಳ ವಾಗಿ ಮತ್ತು ಸುಲಭವಾಗಿ ಚಿಕ್ಕ ಚಿಕ್ಕ ವಾಕ್ಯಗಳ ಮೂಲಕ ಓದುಗರಿಗೆ ಅರ್ಥವಾಗುವಂತೆ ಬರೆಯುವುದು ಪಾಂಡಿತ್ಯದ ಲಕ್ಷಣ. ಅಲ್ಲದೆ ಹೇಳುವುದನ್ನು ನೇರವಾಗಿ, ಸರಳವಾಗಿ, ಅರ್ಥವತ್ತಾಗಿ ಮತ್ತು ಪರಿಣಾಮಕಾರಿಯಾಗಿ ಹೇಳುವುದು ಒಳ್ಳೆಯದು. ಹಾಗೂ ಈ ಕಾರ್ಯ ಶ್ರಮಸಾಧ್ಯವಾದುದು. ಇದು ಸ್ವತಃ ಸಾಧನೆಯಿಂದ ಮಾತ್ರ ಸಾಧ್ಯ.

**4. ಪರಿಚಯುವಾದ ಪದಗಳ ಬಳಕೆ.**

ವಾಕ್ಯ ರಚನೆಗಳಲ್ಲಿ ಪರಿಚಿತವಾದ ಪದಗಳನ್ನೇ ಉಪಯೋಗಿ

ಸುವುದು ಲೇಸು. ಆಗ ಮಾತ್ರ ಓದುಗನ ಕಣ್ಣಿನ ಓಟ ಸರಾಗ ವಾಗಿ ಹೋಗುವುದು. ಕಣ್ಣಿನ ಚಲನೆ ಹಿಮ್ಮೆಟ್ಟುವುದಿಲ್ಲ ಎಂಬು ದಾಗಿ ಹಿಂದೆಯೇ ವಿವರಿಸಿದೆ. ಹೊಸದಾಗಿ ಅಕ್ಷರಸ್ಥನಾದ ಮನುಷ್ಯ ನಿಗೆ ಪರಿಚಿತವಾದ ಪದಗಳು ಆತನ ಮನೋಭಿತ್ತಿಯಲ್ಲಿರುವುವು. ಅಂತಹ ಪದಗಳು ಸಾಮಾನ್ಯವಾಗಿ 2-3 ಅಕ್ಷರಗಳಿಂದ ಕೂಡಿದ ಪದಗಳೇ ಆಗಿರುವುವು. ಸಣ್ಣ ಸಣ್ಣ ಪದಗಳು ಮನುಷ್ಯನ ನಿತ್ಯ ವ್ಯವಹಾರದಲ್ಲಿ ಕಂಡುಬರುವ ಪದಗಳು. ಪದಗಳು ಹೆಚ್ಚಿನ ಒತ್ತಕ್ಷರಗಳಿಂದ ಕೂಡಿರಬಾರದು. ಸಾಧ್ಯವಾದಷ್ಟು ಸಂಯುಕ್ತಾ ಕ್ಷರಗಳನ್ನು ಮತ್ತು ವಿಜಾತೀಯ ಒತ್ತಕ್ಷರಗಳನ್ನು ಬಿಟ್ಟರೆ ಒಳ್ಳೆ ಯದು. ಉದಾಹರಣೆಗೆ "ಬಹು ಜನೋಪಯುಕ್ತವಾದುದಾಗಿ ರುತ್ತದೆ". ಇದು 14 ಅಕ್ಷರಗಳಿಂದ ಕೂಡಿದೆ. ಇದನ್ನು ಈ ರೀತಿ ಒಡೆದು ಬರೆಯುವುದರಿಂದ ಓದಲು ಅನುಕೂಲ. "ಬಹು ಜನಕ್ಕೆ ಉಪಯೋಗ ಆಗುತ್ತದೆ". ನಭೋಮಂಡಳ, ಭಾಸ್ಕರ, ಮೃತ್ಯು, ಭೋಜನ, ಪಿತೃ ಮತ್ತು ಮಾತೃ ಈ ಪದಗಳಲ್ಲಿ 2ರಿಂದ 5 ಅಕ್ಷರ ಗಳಿವೆ. ಇವು ಪರಿಚಯವಾದ ಪದಗಳೇ ? ಇವುಗಳೆಲ್ಲಾ ಸಂಸ್ಕೃತ ಪದಗಳು. ಈ ಪದಗಳ ಬದಲು ಆಕಾಶ, ಸೂರ್ಯ, ಸಾವು, ಊಟ, ತಂದೆ ಮತ್ತು ತಾಯಿ ಎಂಬ ಪದಗಳು ಹೆಚ್ಚಿನ ಬಳಕೆ ಯಲ್ಲಿರುವ ಪದಗಳು. ಸುಲಭವಾಗಿ ಅರ್ಥವಾಗಬಲ್ಲವು. "ನಭೋ ಮಂಡಳದಲ್ಲಿ ತಾರೆಗಳು ಮಿನುಗುತ್ತಿವೆ." ಈ ವಾಕ್ಯದ ಬದಲು "ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿವೆ." ಎಂಬುದು ಸುಲಭ ವಾಗಿ ಅರ್ಥವಾಗುವ ವಾಕ್ಯ.

ಅಮೆರಿಕ ದೇಶದಲ್ಲಿ ಜನಪ್ರಿಯವಾಗಿ ಹಾಗೂ ಹೆಚ್ಚಿಗೆ ಮಾರಾಟವಾಗುವ ಪುಸ್ತಕಗಳಲ್ಲಿ ವಾಕ್ಯಗಳ ಉದ್ದವನ್ನು ಕಂಡು

ಹಿಡಿದಿರುವರು. ಅಷ್ಟೇ ಅಲ್ಲ. ಪದಗಳಲ್ಲಿರುವ ಸರಾಸರಿ ಅಕ್ಷರಗಳನ್ನು (Syllabus) ಸಹ ಕಂಡುಹಿಡಿದಿರುವರು. ಇಲ್ಲಿ ಅಂತಹ ಕೆಲವು ಪುಸ್ತಕಗಳ ವಿವರಗಳನ್ನು ಕೆಳಗೆ ಕೊಡಲಾಗಿದೆ.

| ಹೆಚ್ಚಿಗೆ ಮಾರಾಟವಾದ ಪುಸ್ತಕಗಳು | ಪದಗಳಲ್ಲಿರುವ ಅಕ್ಷರಗಳ ಶೇಕಡ ಸರಾಸರಿ ಸಂಖ್ಯೆ |
|---|---|
| 1) ಗಾನ್ ವಿತ್ ದಿ ವಿಂಡ್ | 4.96 |
| 2) ಆಲಿವರ್ ಟ್ವಿಸ್ಟ್ | 5.97 |
| 3) ಬೆನ್‌ಹರ್ | 5.69 |
| 4) ಐವಾನ್ ಹೊ | 6.86 |

**5. ಅನಾವಶ್ಯಕ ಪದಗಳನ್ನು ಬಿಡುವುದು.**

ಪದಗಳು ಸಾಹಿತಿಯ ಜ್ಞಾನಭಂಡಾರದಲ್ಲಿರುವ ನಾಣ್ಯಗಳಿದ್ದಂತೆ. ಚೆನ್ನಾಗಿ ಆಲೋಚಿಸಿ ನಾಣ್ಯಗಳನ್ನು ಖರ್ಚುಮಾಡುವಂತೆ ಪದಗಳನ್ನೂ ಸಹ ಉಪಯೋಗ ಮಾಡುವುದು ವಿವೇಕವಾದದ್ದು. ಉದಾಹರಣೆಗೆ 'ಊಟ ಮಾಡಿ ಆಯಿತು'. ಇದರ ಬದಲು 'ಊಟ ಆಯಿತು' ಎಂದು ಹೇಳಬಹುದು. 'ಮಲಗಿ ನಿದ್ರೆ ಮಾಡಿತು'. ಇದರ ಬದಲು 'ನಿದ್ರೆ ಮಾಡಿತು'. ಎಂದು ಬಳಸಬಹುದು. 'ಮಾಡಿ'' ಮತ್ತು ''ಮಲಗಿ' ಎಂಬ ಪದಗಳು ಅನಾವಶ್ಯಕ ಪದಗಳು.

ಇದು ವಿಜ್ಞಾನ ಯುಗ. ವಿಜ್ಞಾನ ಬೆಳೆದಂತೆಲ್ಲಾ ಹೊಸ ಹೊಸ ಪದಗಳು ಸೃಷ್ಟಿಯಾಗುವುವು. ಹೊತೆಗೆ ಇತರ ಭಾಷೆಗಳಿಂದ ಹೊಸ ಪದಗಳು ನಮ್ಮ ಭಾಷೆಯ ಶಬ್ದಕೋಶಕ್ಕೆ ಸೇರುವುವು. ಬಸ್ಸು, ರೈಲು, ಟಿಕಟ್, ಸೈಕಲ್ಲು ಮುಂತಾದ ಪದಗಳು ಇಂಗ್ಲಿಷ್ ಭಾಷೆಯಿಂದ ಕನ್ನಡಕ್ಕೆ ಬಂದವು. ಭಾಷೆಯ ಮೇಲಿನ

ಅತಿಯಾದ ವ್ಯಾಮೋಹದಿಂದ ಈ ಪದಗಳಿಗೆ ಅಚ್ಚ ಕನ್ನಡ ಪದಗಳನ್ನು ಹುಡುಕದಿರುವುದೇ ಒಳ್ಳೆಯದು. ಕಾರಣ, ಅವು ಆಂಗ್ಲೇಯ ಪದಗಳಾದರೂ ನಮ್ಮ ಜನರಿಗೆ ಚಿರಪರಿಚಿತವಾದ ಮತ್ತು ಬಳಕೆಯಲ್ಲಿರುವ ಪದಗಳು. ಇವುಗಳಿಗೆ ಬದಲಾಗಿ ಅಚ್ಚ ಕನ್ನಡದ ಪದಗಳನ್ನು ಬಳಸಲು ಪ್ರಯತ್ನಿಸಿದಲ್ಲಿ ಪ್ರಾಯಶಃ ಅವು ಓದುಗರಿಗೆ ಅರ್ಥವಾಗದೆ ಹೋಗಬಹುದು. ರಾಕೆಟ್, ಟಿಲಿವಿಷನ್ ರೇಡಿಯೋ ಮುಂತಾದ ಪದಗಳು ವಿಜ್ಞಾನದ ಬೆಳವಣಿಗೆಯೊಂದಿಗೆ ಕನ್ನಡ ಭಾಷೆಗೆ ಬಂದಿವೆ.

ಕಾಲ ಬದಲಾದಂತೆ ಶಬ್ದಕೋಶ ವಿಸ್ತಾರವಾಗುವುದು. ಈ ಅಂಶವನ್ನು ಆಂಗ್ಲೇಯ ಭಾಷೆಯ ನಿಘಂಟಿನ ಬೆಳವಣಿಗೆಯಿಂದ ಗೊತ್ತು ಮಾಡಬಹುದು. 1828 ರಲ್ಲಿ ನೋವಾ ವೆಬ್‌ಸ್ಟರ್ (Noah Webster) ರಚಿಸಿದ ನಿಘಂಟಿನಲ್ಲಿ 70,000 ಪದಗಳಿದ್ದುವು. 1864ರಲ್ಲಿ 114,000 ಪದಗಳಾದುವು. 1909 ರಲ್ಲಿ 400,000 ಕ್ಕೆ ಏರಿತು. ಪ್ರಾಯಶಃ ಇತ್ತೀಚಿಗೆ ಪ್ರಕಟವಾದ ನಿಘಂಟಿನಲ್ಲಿ ಒಂದು ಲಕ್ಷಕ್ಕೆ ಕಡಿಮೆಯಿಲ್ಲದೆ ಹೊಸ ಪದಗಳು ಸೇರಿವೆ. ಅಂದರೆ ಈ ಒಂದು ನೂರು ವರ್ಷಗಳಲ್ಲಿ ಆಂಗ್ಲೇಯ ಭಾಷೆ ಸಾಕಾದಷ್ಟು ಬೆಳೆದಿದೆ. ಅಂತೆಯೇ ಎಲ್ಲಾ ಭಾಷೆಗಳು ಸಹ. ಇದು ಮಾನವನ ಪ್ರಗತಿಯ ಲಕ್ಷಣ.

ನಿಘಂಟಿನಲ್ಲಿರುವ ಎಲ್ಲಾ ಪದಗಳನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಲು ಸಾಧ್ಯವೆ? ಅಷ್ಟೊಂದು ಪದ ಸಂಪತ್ತು ವ್ಯಕ್ತಿಯ ನಿತ್ಯ ವ್ಯವಹಾರಕ್ಕೆ ಬೇಕೆ? ಒಬ್ಬನ ಪದಸಂಪತ್ತು ಯಾವ ರೀತಿ ಬೆಳೆಯುವುದು ಎಂಬುದನ್ನು ಕೆಳಗೆ ಕೊಟ್ಟಿದೆ.

| ವಯುಸ್ಸು | ಪದಸಂಪತ್ತು | ವಯುಸ್ಸು | ಪದಸಂಪತ್ತು |
|---|---|---|---|
| 6 | 200 | 13 | 5400 |
| 7 | 2750 | 14 | 5500 |
| 8 | 3800 | 15 | 6000 |
| 9 | 4300 | 16 | 7000 |
| 10 | 4500 | 17 | 6900 |
| 11 | 5100 | 18 | 6800 |
| 12 | 5500 | 19 | 7300 |

ಮೆಡೋರಾ ಸ್ಮಿತ್ ಎಂಬಾಕೆ 6 ವರ್ಷದಿಂದ 19 ವಯುಸ್ಸಿನ 867 ವಿದ್ಯಾರ್ಥಿಗಳ ಪದಸಂಪತ್ತನ್ನು ಪರಿಶೋಧಿಸಿದಳು. ಈ ಸಂಶೋಧನೆಯಿಂದ ಹಲವು ಮಕ್ಕಳ ಪದಸಂಪತ್ತಿನ ಸರಾಸರಿ ಅಂಕಗಳು ಮೇಲ್ಕಂಡಂತೆ ಇದ್ದುವೆಂದು ಕಂಡುಬಂದಿದೆ. ಶಿಕ್ಷಣ ತಜ್ಞರ ಅಂದಾಜಿನ ಪ್ರಕಾರ ಒಬ್ಬ ವಯಸ್ಕನ ಪದಸಂಪತ್ತು 2000 ಪದಗಳಿಂದ 20,000 ಪದಗಳಿರಬಹುದು. ಒಬ್ಬ ಸಾಮಾನ್ಯ ಹೈಸ್ಕೂಲು ವಿದ್ಯಾರ್ಥಿಯ ಪದಸಂಪತ್ತು 10,000 - 15,000 ಪದಗಳ ಪರಿಮಿತಿಯಲ್ಲಿ ಇರುವುದು. ನಮ್ಮ ಬೆಳವಣಿಗೆಯ ಜೊತೆಗೆ ಶಬ್ದಭಂಡಾರವೂ ಸಹ ಬೆಳೆಯುವುದು. ಸಾಮಾನ್ಯ ವಯುಸ್ಕನ ಶಬ್ದಸಂಪತ್ತು 15,000 - 18,000 ಪದಗಳಿರಬಹುದು. ಇದು ಇನ್ನೊಂದು ಅಂದಾಜು. ಆದರೆ ಈ ಪದಸಂಪತ್ತು ವ್ಯಕ್ತಿಯಿಂದ ವ್ಯಕ್ತಿಗೆ ಅವನ ಅನುಭವಕ್ಕೆ ಅನುಗುಣವಾಗಿ ಇರುವುದು. ಮೇಲೆ ಸೂಚಿಸಿರುವ 20,000 ಪದಸಂಪತ್ತಿನಲ್ಲಿ ವಿವಿಧ ಅರ್ಥ ಕೊಡುವ ಒಂದೊಂದು ಪದವೂ ಸಹ ಸೇರಿರುವುದು. ಉದಾಹರಣೆಗೆ 'ಎತ್ತು' ಎಂಬ ಪದಕ್ಕೆ ಎರಡು

ಅರ್ಥವಿದೆ. ಪ್ರಾಣಿ, (ಭಾರವನ್ನು) ಎತ್ತು. ಸರ್ವಸಾಮಾನ್ಯ ವಾಗಿ ಜನರ ನಿತ್ಯ ವ್ಯವಹಾರ ಪರಿಚಿತವಾಗಿರುವ ಸುಮಾರು 3000 ಪದಗಳ ಚೌಕಟ್ಟಿನಲ್ಲೇ ಇರುವುದು ಎಂದು ಅಂದಾಜು ಮಾಡಲಾಗಿದೆ.

ಇಂಗ್ಲಿಷ್ ಭಾಷೆಯಲ್ಲಿ ಕೆಲವು ಪದಗಳು ಬಹಳ ಬಳಕೆ ಯಲ್ಲಿ ಕಾಣಬರುತ್ತವೆ. ಆ ಭಾಷೆಯಲ್ಲಿ the, of, and, to, a, in, that, it, is, I- ಈ ಚಿಕ್ಕ ಪದಗಳು ಮಾತನಾಡುವ ಮತ್ತು ಬರವಣಿಗೆಯ ಪದಸಂಪತ್ತಿನ 1/4 ಭಾಗ ಎಂದು ಕಂಡು ಬಂದಿದೆ. ಅವುಗಳಂತೆಯೇ ಕನ್ನಡ ಭಾಷೆಯಲ್ಲೂ ಅದು, ಇದು, ಅವನು, ಇವನು, ಆ, ಈ, ಪದಗಳು ಹೆಚ್ಚಿನ ಬಳಕೆಯಲ್ಲಿ ಇರುವು ದಾಗಿ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯವರು ತಯಾರು ಮಾಡಿರುವ ಪದಪಟ್ಟಿಯಿಂದ ಕಂಡುಬಂದಿದೆ.

ಟೈಮ್ಸ್ ಎಂಬುದು ಅಮೆರಿಕದಲ್ಲಿ ಒಂದು ಜನಪ್ರಿಯ ಪತ್ರಿಕೆ. ಆ ಪತ್ರಿಕೆ ಕೇವಲ 10,000 ಪದಗಳ ಚೌಕಟ್ಟಿನಲ್ಲೇ ಪ್ರಕಟಣಾ ಕಾರ್ಯ ನಡೆಸುವುದು. ಕೆಲವು ಸಂದರ್ಭಗಳಲ್ಲಿ ಹೆಚ್ಚೆಂದರೆ ಶೇಕಡ 1ಕ್ಕೆ ಮೀರಿ ಹೊಸ ಪದಗಳನ್ನು ಬಳಸುವು ದಿಲ್ಲ. ಆದ್ದರಿಂದ ಬರವಣಿಗೆಯಲ್ಲೂ ಸಹ ಸಾಮಾನ್ಯವಾಗಿ ಶೇಕಡ 98 ಭಾಗ ಪದಗಳು ಈ 10,000 ಪದಗಳ ಚೌಕಟ್ಟಿ ನಲ್ಲೇ ಉಪಯೋಗಿಸಲ್ಪಡುವುವು. ಆಯಾ ಕಾಲದಲ್ಲಿ ಆಡುವಭಾಷೆ ಯಲ್ಲಿ ಬಳಸುವ 1000 ಪದಗಳಲ್ಲಿ ಶೇಕಡ 80 ಪದಗಳು ಸಾಮಾನ್ಯ ಜನರಿಗೆ ಪರಿಚಿತವಾದ ಪದಗಳು.

ಜನರಿಗೆ ಪರಿಚಿತವಾದ ಪದಗಳನ್ನು ಕಂಡು ಹಿಡಿಯಲು ವೈಜ್ಞಾನಿಕ ವಿಧಾನಗಳಿವೆ. ಈ ಕ್ರಮದಲ್ಲಿ ಪರಿಚಿತವಾದ ಪದ

ಪಟ್ಟಿಗಳನ್ನು ತಯಾರಿಸುವರು. ಅಮೇರಿಕದಲ್ಲಿ ಡಾ|| ಇ.ಎಲ್. ಥಾರನ್‌ಡೈಕ್ ಶಾಸ್ತ್ರೀಯವಾದ ಪದಪಟ್ಟಿಯನ್ನು ರಚಿಸಲು 20 ವರ್ಷಗಳಕಾಲ ಶ್ರಮಿಸಿದನು. ಪಠ್ಯ ಪುಸ್ತಕಗಳು, ನಿಯತ ಕಾಲಿಕ ಪತ್ರಿಕೆಗಳು, ಜನಪ್ರಿಯವಾದ ಇತರೇ ಸಾಹಿತ್ಯಗಳಿಂದ 18,500,000 ಪದಗಳನ್ನು ಸಂಗ್ರಹಿಸಿದನು. ಈ ಪದಗಳನ್ನು ಛಟ್ಟಿಇಳಿಸಿ.ಚಿರಪರಿಚಿತವಾದ 30 ಸಾವಿರ ಪದಗಳ ಪಟ್ಟಿ ತಯಾರಿಸಿದನು. ಪದಗಳ ಬಳಕೆಯ ಪ್ರಮಾಣಕ್ಕೆ ಅನುಗುಣವಾಗಿ ಈ 30 ಸಾವಿರ ಪದಗಳ ಪಟ್ಟಿಯಿಂದ ಪ್ರತಿ 2 ಸಾವಿರ ಪದಗಳ ಪಟ್ಟಿಯನ್ನು ಆಗಿಂದಾಗ್ಗೆ ಪ್ರಕಟಿಸಿದನು. ಇಂತಹ ಪದಪಟ್ಟಿಗಳು ವಿವಿಧ ಭಾಷೆಗಳಲ್ಲಿ ಪ್ರಕಟವಾಗಿವೆ.

ಭಾರತದಲ್ಲೂ ಸಹ ಈ ಬಗ್ಗೆ ಕಾರ್ಯ ನಡೆದಿದೆ. ಬೊಂಬಾಯಿ ನಗರ ಸಮಾಜ ಶಿಕ್ಷಣ ಸಮಿತಿ ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಸಾಹಿತ್ಯ ರಚಿಸಲು ಮರಾಠಿ ಭಾಷೆಯಲ್ಲಿ 2067 ಪದಗಳ ಪಟ್ಟಿಯನ್ನು ತಯಾರಿಸಿದೆ. ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿ 2500 ಪದಗಳ ಪಟ್ಟಿಯನ್ನು ತಯಾರಿಸಿದೆ. ಹಿಂದಿ ಭಾಷೆಯಲ್ಲೂ ಸಹ ಇಂತಹ ಪದಪಟ್ಟಿ ತಯಾರಾಗಿದೆ. ವಯಸ್ಕರಿಗೆ ಪಠ್ಯ ಪುಸ್ತಕಗಳನ್ನು ರಚಿಸಲು ಹಾಗೂ ಸೂಕ್ತವಾದ ಪೋಷಕ ಸಾಹಿತ್ಯವನ್ನು ರಚಿಸಲು ಈ ಪದ ಪಟ್ಟಿಗಳು ಉಪಯೋಗಕ್ಕೆ ಬರುವುವು.

**6. ಸತ್ವಶಾಲಿಯಾದ ಕ್ರಿಯಾಪದದ ಬಳಕೆ**

ಕ್ರಿಯಾಪದವೇ ವಾಕ್ಯದ ಜೀವಾಳ. ವಾಕ್ಯ ಪರಿಣಾಮಕಾರಿಯಾದ ಪ್ರಭಾವ ಬೀರಬೇಕಾದರೆ ಕ್ರಿಯಾಪದ ಸತ್ವಶಾಲಿಯಾಗಿರಬೇಕು. .ಕರ್ತರಿ ಪ್ರಯೋಗದಿಂದ ಕೂಡಿದ ವಾಕ್ಯವು

ಸತ್ವಶಾಲಿಯಾಗಿರುವುದು. ಕರ್ಮಣಿ ಪ್ರಯೋಗದಿಂದ ವಾಕ್ಯಕ್ಕೆ ಅಷ್ಟೊಂದು ಶಕ್ತಿ ಬರಲಾರದು ಉದಾಹರಣೆಗೆ 'ಆದ್ದರಿಂದ ನಮ್ಮ ಮುಂದುವರಿಕೆ ಆಗಲೇಬೇಕು'. 'ತಮ್ಮಿಂದ ಭೋಜನ ಆಯಿತೆ' ಇವುಗಳ ಬದಲಾಗಿ 'ಆದ್ದರಿಂದ ನಾವು ಮುಂದುವರಿಯಬೇಕು' 'ತಾವು ಭೋಜನನಮಾಡಿದಿರಾ?' ಇವು ನೇರವಾದ ಅರ್ಥವನ್ನು ಸೂಚಿಸುವ ವಾಕ್ಯಗಳು. ಕರ್ತರಿ ಪ್ರಯೋಗದಿಂದ ಕೆಲಸ ಸಾಗುವುದಿದ್ದರೆ ಕರ್ಮಣಿ ಪ್ರಯೋಗಬೇಡ.

7. ಕಣ್ಣಿಗೆ ಕಟ್ಟುವಂತಹ ಪದಗಳ ಬಳಕೆ

ಬಳಸುವ ಭಾಷೆಯಲ್ಲಿ ಓದುಗರಿಗೆ ಪರಿಚಯವಾದ ಪದಗಳೇ ಇದ್ದರೆ ಒಳ್ಳೆಯದು. ಆ ಪದಗಳು ಅವರ ಕಣ್ಣಿಗೆ ಕಟ್ಟುವಂತಹ ಪದಗಳಾಗಿದ್ದರೆ ಉತ್ತಮ. ಆಗ ವಿಷಯ ಚೆನ್ನಾಗಿ ಅರ್ಥವಾಗುವುದು. ಓದುಗರ ಮನಸ್ಸನ್ನು ಸೆಳೆಯುವುದು. ಬಳಸುವ ಪದಗಳು ಕಣ್ಣಿಗೆ ಮತ್ತು ಕಿವಿಗೆ ಆಪ್ಯಾಯಮಾನವಾಗಿ ಇರಬೇಕು. ಕಣ್ಣಿಗೆ ಕಟ್ಟಿದಹಾಗೆ ಅರ್ಥವನ್ನು ವ್ಯಕ್ತಪಡಿಸುವ, ಅನುಭವವನ್ನು ಮನಸ್ಸಿಗೆ ತರುವಂತಹ ಪದಗಳು ಅವಶ್ಯಕ. ಓದುಗನ ಮನಸ್ಸನ್ನು ಹಿಡಿದು ನಿಲ್ಲಿಸುವಂತಹ ಪದಗಳಿದ್ದರೆ ಒಳ್ಳೆಯದು. ಉದಾಹರಣೆಗೆ 'ಮಾತು ಹತ್ತಿಯಂತೆ ಮೃದು', 'ಶ್ರೀಗಂಧದ ವಾಸನೆಯಂತೆ ಹಿತವಾಗಿರಬೇಕು.' 'ಕಿವಿಗೆ ಗೆಜ್ಜೆ ಸದ್ದಿನಂತೆ ಇರಬೇಕು'. 'ಕಿತ್ತಲೇ ಹಣ್ಣಿನ ಬಣ್ಣದಂತೆ ರಂಜಿಸಬೇಕು.'

8. ಮಾತನಾಡುವಂತೆ ಬರವಣಿಗೆ ಇದ್ದರೆ ಮೇಲು.

ಬರವಣಿಗೆ ಮಾತನಾಡಿದಂತೆ ಇದ್ದರೆ ಆಕರ್ಷಣೀಯವಾಗಿರುವುದು. ಬರಹ ಓದುಗನಿಗೇ ಅಲ್ಲವೆ? ಮಾತನಾಡುವ ಭಾಷೆ ಓದುಗನ ಸ್ವಂತಭಾಷೆ. ಅದನ್ನು ಆತನು ಅಚ್ಚಿನಲ್ಲಿ ನೋಡಿದಾಗ

ಸುಲಭವಾಗಿ ಅರ್ಥ ಮಾಡಿ ಕೊಳ್ಳುವನು, ಮಾತನಾಡುವಾಗ ಎದುರಿಗೆ ಇರುವ ವ್ಯಕ್ತಿಯ ಪ್ರತಿಕ್ರಿಯೆಯನ್ನು ಪರಿಶೀಲಿಸಿ ಮಾತು ಗಳನ್ನು ಸೂಕ್ತವಾಗಿ ಬದಲಿಸಿಕೊಳ್ಳಲು ಅವಕಾಶವಿದೆ. ಆತನ ಮುಖಚರ್ಯೆ ನಮ್ಮ ಕಣ್ಣಿಗೆ ಬೀಳುವುದು. ಮಾತಿನ ಕಡೆಗೆ ಆತನ ಗಮನ ಇದೆಯೆ? ಅಥವಾ ಇಲ್ಲವೆ ಎಂಬುದನ್ನು ಕಾಣುವ ಅವಕಾಶ ಇದೆ. ಆದರೆ ಗ್ರಂಥಕರ್ತ ತನಗೆ ಕಾಣದಿರುವ ಓದುಗರೊಡನೆ ಬರಹದ ಮೂಲಕ ಮಾತನಾಡುವನು. ಆದ್ದರಿಂದ ನಮ್ಮ ಬರಹ ಎದುರುಬದುರಿಗೆ ಕುಳಿತು ಸಂಭಾಷಣೆ ಮಾಡಿದಷ್ಟೇ ಪರಿಣಾಮ ಕಾರಿಯಾಗಿರಬೇಕು. ಆದ್ದರಿಂದ ವಿಷಯ ನಿರೂಪಣೆ ಸಂಭಾ ಷಣೆಯ ಮೂಲಕ ಆದರೆ ಪ್ರಭಾವಯುತವಾಗಿರುವುದು. ಇದ ರಲ್ಲಿ ಒಂದು ಸಮಸ್ಯೆ ಸಹಜವಾಗಿ ಏಳುವುದು. ಆಡುವಭಾಷೆ ಯನ್ನು ಬರವಣಿಗೆಯಲ್ಲಿ ಎಷ್ಟರ ಮಟ್ಟಿಗೆ ಅಳವಡಿಸಬಹುದು. ಮಾತನಾಡುವಾಗ ಬಳಸುವ ಪದಗಳು ಹೆಚ್ಚಾಗಿ ಗ್ರಾಮ್ಯಶಬ್ದ ಗಳಾಗಬಹುದು. ಅವುಗಳನ್ನು ಬರವಣಿಗೆಯಲ್ಲಿ ಬಳಸಬಹುದೆ? ಎಷ್ಟರಮಟ್ಟಿಗೆ? ಒಂದು ಇತಿಮಿತಿಯಲ್ಲಿ ಗ್ರಾಮ್ಯಶಬ್ದಗಳನ್ನು ಬಳಕೆ ಮಾಡಬಹುದೆ? ಸಂಭಾಷಣೆಯ ಸನ್ನಿವೇಶ ಬಂದಾಗ ಗ್ರಾಮ್ಯ ಶಬ್ದಗಳನ್ನು ಒಂದುಹಿಡಿತದಲ್ಲಿ ಬಳಸಬಹುದು. ಆಗ ಬರವಣಿಗೆಯ ಸೊಗಸು ಹೆಚ್ಚುವುದು. ಅಂದರೆ ಗ್ರಾಮ್ಯಶಬ್ದ ಗಳನ್ನು ಗ್ರಾಮಸ್ಥನ ಬಾಯಿಯಿಂದಲೇ ಹೇಳಿಸಿದರೆ ಬರವಣಿಗೆ ಸ್ವಾಭಾವಿಕವಾಗಿ ಕಾಣುವುದು. ಹಾಗೂ ಬರಹಕ್ಕೆ ಮೆರಗು ಸಿಕ್ಕುವುದು. ಕೆಲವು ಗ್ರಾಮ್ಯಶಬ್ದಗಳನ್ನು ಬರವಣಿಗೆಯಲ್ಲಿ ಬಳ ಸಲು ಕಷ್ಟ. ಕಾರಣ, ಆ ಪದಗಳನ್ನು ಉಚ್ಚರಿಸಲು ತೊಡಕಾ ಗುವುದು. ಏಕೆಂದರೆ ಅವುಗಳು ಹೆಚ್ಚಿನ ಸಂಯುಕ್ತಾಕ್ಷರ

ಗಳಿಂದಲೂ ಮತ್ತು ವಿಜಾತೀಯ ಒತ್ತುಗಳಿಂದಲೂ ಕೂಡಿರುವುವು. ಉದಾಹರಣೆಗೆ ಹೈಕಳು, ಬತ್ತಾರೆ, ತೊಂಟಿನ್ನೆ, ಮಲಗನ್ನೆ.

ವಯಸ್ಕರಿಗೂ ಕಾಲಕ್ರಮೇಣ ಸಾಹಿತ್ಯದಲ್ಲಿ ಆಸಕ್ತಿ ಹುಟ್ಟಬೇಕು. ಗ್ರಂಥಸ್ಥ ಭಾಷೆಯ ಪರಿಚಯವಾಗಬೇಕು. ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಪ್ರಾರಂಭದಲ್ಲಿ ರಚಿಸುವ ಸಾಹಿತ್ಯದಲ್ಲಿ ಉಚ್ಚಾರಣೆಗೆ ತೊಡಕಾಗುವಂತಹ ಗ್ರಾಮ್ಯಶಬ್ದಗಳನ್ನು ಒಂದು ಹಿಡಿತದಲ್ಲಿ ಉಪಯೋಗಿಸಬಹುದು. ಅನಂತರ ಮುಂದುವರಿಸಿದ ಸಾಹಿತ್ಯದಲ್ಲಿ ಗ್ರಾಮ್ಯಶಬ್ದಗಳನ್ನು ಹೆಚ್ಚಾಗಿ ಬಳಸದಿರುವುದು ಒಳ್ಳೆಯದು. ಆದರೆ ಅಂತಹ ಶಬ್ದಗಳು ಗ್ರಂಥ ಭಾಷೆಗೆ ಹೊಂದಿಕೊಂಡಲ್ಲಿ ಉಪಯೋಗಿಸಲು ಪ್ರಾಯಶಃ ಅಡ್ಡಿ ಬರಲಾರದು.

ಮೈಸೂರಿಗೆ 1956 ರಲ್ಲಿ ಇತರೇ ರಾಜ್ಯಗಳ ಕನ್ನಡ ಪ್ರದೇಶಗಳು ವಿಲೀನಗೊಂಡವು. ಹೈದರಾಬಾದು, ಬೊಂಬಾಯಿ ಮತ್ತು ಮದರಾಸು ಕರ್ಣಾಟಕ ಭಾಗಗಳಿಂದ ಕನ್ನಡಪ್ರದೇಶಗಳು ಮೈಸೂರು ರಾಜ್ಯದಲ್ಲಿ ವಿಲೀನಗೊಂಡವು. ಆದ್ದರಿಂದ ಇಲ್ಲಿ ನಾಲ್ಕು ರೀತಿಯ ಪ್ರಾದೇಶಿಕ ಭಾಷಾ ಸಮಸ್ಯೆ ಇದೆ. 1971 ನೇ ಮಾರ್ಚಿ ತಿಂಗಳಿನಲ್ಲಿ ಕೆಂಗೇರಿ ವಿದ್ಯಾಪೀಠದಲ್ಲಿ 15 ದಿನಗಳ ಕಾಲ ಒಂದು ಸಾಹಿತ್ಯ ರಚನಾಲಯ ನಡೆಯಿತು. ಅಲ್ಲಿ ತಯಾರಾದ ಎರಡು ಕೃತಿಗಳನ್ನು ಪಕ್ಕದ ಹಳ್ಳಿಯಲ್ಲಿ ಮೌಲ್ಯಮಾಪನೆ ಮಾಡಲಾಯಿತು. ಕಡೆಯಲ್ಲಿ ಹಳ್ಳಿಗರು ಜನಪದ ಗೀತೆಗಳನ್ನು ಹೇಳಿದರು. ಬರಹಗಾರರ ಪೈಕಿ ಧಾರವಾಡದಿಂದ ಬಂದಿದ್ದವರು ಒಂದು ಗೀಗಿಪದವನ್ನು ಹಾಡಿದರು. ಅವರು ಹಾಡನ್ನು ಮುಗಿಸಿದರು. ನಂತರ ಹಳ್ಳಿಗರಲ್ಲಿ ಒಬ್ಬನು ಎದ್ದು

'ಕನ್ನಡದಲ್ಲಿ ಒಂದು ಹಾಡು ಹೇಳಿ ಸ್ವಾಮಿ' ಎಂದು ಹೇಳಿದನು. ಆಗ ಹೇಳಿದ್ದ ಹಾಡು ಕನ್ನಡ ಭಾಷೆಯದೇ. ಆದರೆ ಅದು ಧಾರವಾಡ ಪ್ರಾದೇಶಿಕ ಭಾಷೆಗೆ ಸಂಬಂಧಪಟ್ಟದ್ದು. ಆದ್ದರಿಂದ ಹಳ್ಳಿಗನಿಗೆ ಅರ್ಥವಾಗಲಿಲ್ಲ. ಇದು ಬರಹಗಾರರಿಗೆ ಒಂದು ಪಾಠ ವನ್ನು ಕಲಿಸುವಂತಿದೆ. ಪ್ರಾದೇಶಿಕ ಭಾಷೆಯನ್ನು ಬಳಸುವಾಗ ಸಾಮಾನ್ಯವಾಗಿ ಎಲ್ಲಾ ಕಡೆಗಳಿಗೂ ಅರ್ಥವಾಗುವಂತಹ ಪದ ಗಳನ್ನೇ ಬಳಸಿದರೆ ಒಳ್ಳೆಯದು. ಇಲ್ಲವೇ ಆಯಾ ಪ್ರಾದೇಶಿಕ ಪದಗಳಿಗೆ ಇತರ ಕಡೆಗಳಲ್ಲಿ ಬಳಸುವ ಪದಗಳನ್ನು ಕಂಸದಲ್ಲಿ ಕೊಡಬಹುದು. ಇದರಿಂದ ಪ್ರಾದೇಶಿಕ ಭಾಷಾಸಮಸ್ಯೆ ಸ್ವಲ್ಪ ಮಟ್ಟಿಗೆ ನಿವಾರಣೆಯಾಗುವುದು.

### 9. ಓದುಗನ ಹಿನ್ನೆಲೆ

ಈ ವಿಷಯವನ್ನು ಹಿಂದೆಯೇ ಪ್ರಸ್ತಾಪ ಮಾಡಲಾಗಿದೆ. ನಾವು ಬಳಕೆ ಮಾಡುವ ಪದಗಳೇ ಓದುಗನ ಮನಸ್ಸಿಗೆ ಕಲ್ಪನೆ ಯನ್ನು ತಂದುಕೊಡುವುವು. ಆ ಕಲ್ಪನೆಯನ್ನು ತನ್ನ ಅನುಭವದ ಮೂಸೆಯಲ್ಲಿ ಒರೆಹಚ್ಚುವನು. ಬರಹಗಾರ ಒಂದು ರೀತಿಯಲ್ಲಿ ಓದುಗನ ಪರಕಾಯ ಪ್ರವೇಶ ಮಾಡಿದಂತೆ, ಅವನ ಮನಸ್ಸನ್ನು ಅರ್ಥಮಾಡಿಕೊಂಡು ಬರೆಯಬೇಕು. ಪದಗಳ ಅರ್ಥವ್ಯಾಪ್ತಿ ಒಬ್ಬರಿಂದ ಇನ್ನೊಬ್ಬರಿಗೆ ವ್ಯತ್ಯಾಸ ಆಗಬಹುದು. ಈ ಬದಲಾ ವಣೆ ಆಯಾ ಓದುಗನ ಶಕ್ತಿಯನ್ನು ಅವಲಂಬಿಸುವುದು. ವಿಷಯದ ವಿವರಣೆ ಬೇಕು. ವಿವರಣೆ ಕೊಡುವಾಗ ಪ್ರಾಮುಖ್ಯ ವಾಗಿ ಹೇಳಬೇಕಾದ ಅಂಶಗಳನ್ನು ಮರೆಯಬಾರದು. ಕಾಲ್ಚೆಂಡಿನ ಆಟಗಾರ ಚೆಂಡಿನ ಕಡೆಗೂ ಮತ್ತು ಆಟದ ಮೈದಾನದ ಕಡೆಗೂ

ಗಮನವಿಡುವಂತೆ ಬರಹಗಾರನು ಬರವಣಿಗೆ ಮತ್ತು ಓದುಗನ ಕಡೆಗೂ ಗಮನವಿಡಬೇಕು.

### 10 ಬರವಣಿಗೆಯಲ್ಲಿ ವೈವಿಧ್ಯತೆ

ಓದುಗನ ದೃಷ್ಟಿಯಿಂದ ವಸ್ತುವನ್ನು ತಿಳಿಭಾಷೆಯಲ್ಲಿ ಬರೆಯಬೇಕು. ಪ್ರಾರಂಭದಲ್ಲಿ ಸಾಹಿತ್ಯಪೂರ್ಣವಾದ ಪುಸ್ತಕಗಳು ಹೊಸದಾಗಿ ಅಕ್ಷರಸ್ಥರಾದವರಿಗೆ ಹಿಡಿಸದು. ಅವರಿಗೆ ಬೇಕಾದ ಪುಸ್ತಕಗಳ ಲಕ್ಷಣಗಳನ್ನು ಹಿಂದೆಯೇ ವಿವರಿಸಲಾಗಿದೆ. ಹೊಸದಾಗಿ ಅಕ್ಷರಸ್ಥನಾದ ವಯಸ್ಕ ಓದುಗನು ಓದುವ ಕಾರ್ಯದಲ್ಲಿ ಹೊಸದಾಗಿ ತೊಡಗುತ್ತಿರುವನು. ಬಳಸುವ ಭಾಷೆ, ಶೈಲಿ ಮತ್ತು ವಿಷಯ ನಿರೂಪಣೆಯಲ್ಲಿ ಒಂದೇ ಧಾಟಿಯನ್ನು ಅನುಸರಿಸಿದಲ್ಲಿ ಓದುಗನಿಗೆ ಬೇಸರಿಕೆ ಬರಬಹುದು. ನಾವು ಇಂದು ಹಾಕಿದ ಬಟ್ಟೆಯನ್ನು ನಾಳೆಯೂ ಧರಿಸಲು ಇಚ್ಛಿಸುವುದಿಲ್ಲ. ಹಾಗೆಯೇ ದಿನವೂ ಒಂದೇ ಬಗೆಯ ಊಟಮಾಡಲು ಬಯಸುವುದಿಲ್ಲ. ಇದೇ ಮಾದರಿಯಲ್ಲಿ ಬರವಣಿಗೆಯೂ ಸಹ ಇರಬೇಕು. ವಾಕ್ಯ ರಚನೆ, ಪದಗಳ ಬಳಕೆ ಮತ್ತು ವಿಷಯ ನಿರೂಪಣೆಯಲ್ಲಿ ವೈವಿಧ್ಯತೆ ಬರಲು ಆಳವಾದ ಅಧ್ಯಯನ ಮಾಡಬೇಕು. ವಿಷಯಸಂಗ್ರಹ ಮಾಡಬೇಕು. ಸಂಗ್ರಹಿಸಿದ ವಿಷಯವನ್ನು ನಿರೂಪಿಸುವುದರಲ್ಲಿ ಹೆಚ್ಚಿನ ಅಭ್ಯಾಸ ಬೇಕು. ಅಭ್ಯಾಸ ಮಾಡುತ್ತಾ ಬರವಣಿಗೆ ಕುದುರುವುದು. ಇದರೊಡನೆ ಓದುಗನ ಮನಸ್ಸನ್ನು ಅರಿಯುವ ಶಕ್ತಿಯೂ ಸಹ ಹೆಚ್ಚುವುದು. ಬರವಣಿಗೆಯ ಮೂಲಕ ಕಣ್ಣಿಗೆ ಕಾಣದಿರುವ ಓದುಗರೊಡನೆ ಸಂಪರ್ಕ ಬೆಳೆಸುತ್ತೇವೆ. ಇನ್ನೊಬ್ಬನೊಡನೆ ಮಾತನಾಡುವಾಗ ಎದುರಿಗೆ ಇರುವವನ ಮನಸ್ಸು ಮತ್ತು ಮುಖಚರ್ಯೆಯನ್ನು ತಿಳಿದು ಮಾತಿನ ಧಾಟಿಯನ್ನು ಬದಲಾಯಿಸಿ

ಕೊಳ್ಳುತ್ತೇವೆ. ಅಂತೆಯೇ ಓದುಗನನ್ನು ಮನಸ್ಸಿನಲ್ಲೇ ಚಿತ್ರಿಸಿಕೊಂಡು ಬರವಣಿಗೆಯಲ್ಲಿ ವೈವಿಧ್ಯತೆಯನ್ನು ತೋರಿಸಬೇಕು. ನಾಣ್ಣುಡಿ ಮತ್ತು ಗಾದೆಗಳು ಮುಂತಾದುವುಗಳನ್ನು ಬಳಸಬಹುದು.

**11** ಮತ್ತು **12** ಬರಹ ಅಭಿವ್ಯಕ್ತಿಯ ಮಾಧ್ಯಮವಾಗಿರಬೇಕು. ನೀತಿಬೋಧೆ ಮಾಡುವುದಕ್ಕಿಂತ ಹೆಚ್ಚಾಗಿ ನೀತಿವಂತನಾದ ಒಬ್ಬ ವ್ಯಕ್ತಿಯನ್ನೇ ಕುರಿತು ಬರೆಯಬೇಕು.

ಬರೆಯುವ ಪುಸ್ತಕ ವಯಸ್ಕರಿಗಾಗಿ ಎಂಬ ಅಂಶವನ್ನು ಮರೆಯಬಾರದು. ಆತನಿಗೆ ಸಾಕಾದಷ್ಟು ಅನುಭವ ಇರುವುದು. ಜೊತೆಗೆ ಆಲೋಚನಾಶಕ್ತಿಯನ್ನು ಹೊಂದಿರುವನು. ಪೂರ್ವಾಪರವನ್ನು ಯೋಚಿಸಬಲ್ಲವನು. ಸಂದರ್ಭಾನುಸಾರ ನಿರ್ಧಾರಗಳನ್ನು ಸ್ವತಂತ್ರವಾಗಿ ತೆಗೆದುಕೊಳ್ಳಬಲ್ಲನು. ಇಂತಹ ಪ್ರವೃತ್ತಿಯನ್ನು ಬೆಳೆಸುವುದೂ ನಮ್ಮ ಗುರಿ. ಆದ್ದರಿಂದ ಮಕ್ಕಳಿಗೆ ಬರೆಯುವಂತಹ ಬರವಣಿಗೆ ವಯಸ್ಕನಿಗೆ ಸಲ್ಲದು. ಆತ ತನ್ನ ಶಕ್ತಿಯನ್ನು ತಾನು ಅರಿತಿರುವನು. ಆದ್ದರಿಂದ ನಾವು ಬರೆಯುವ ಸಾಹಿತ್ಯದಲ್ಲಿ ನೀತಿಬೋಧೆ ಮಾಡುವ ಕ್ರಮವನ್ನು ಅನುಸರಿಸದಿರುವುದು ಒಳ್ಳೆಯದು. ಈ ಧಾಟಿ ಮಕ್ಕಳ ಬಗ್ಗೆ ಸರಿಹೋಗಬಹುದು. ಆದರೆ ವಯಸ್ಕನ ಮನೋಭಾವಕ್ಕೆ ವ್ಯತಿರಿಕ್ತವಾಗುವುದು.

ಪ್ರಾರಂಭದಲ್ಲಿ ಬರೆಯುವ ಪುಸ್ತಕ ಸಾಹಿತ್ಯಪೂರ್ಣವಾಗಿದ್ದಲ್ಲಿ ಅದು ವಯಸ್ಕರ ಮನಸ್ಸಿಗೆ ಹಿಡಿಸದೆ ಇರಬಹುದು. ಕೇವಲ ವಿಷಯಗಳನ್ನು ಅವನಿಗೆ ತಿಳಿಸುವ ರೀತಿಯಲ್ಲಿರಬೇಕು. ಯಾವ ರೀತಿ ಮತ್ತು ಎಂತಹ ವಿಷಯಗಳನ್ನು ತಿಳಿಸಬೇಕು ಎಂಬ

ವಿಷಯವನ್ನು ಆಗಲೇ ಪ್ರಸ್ತಾಪ ಮಾಡಲಾಗಿದೆ.

ವಿಶ್ವಸಂಸ್ಥೆಯ 26 ನೇ ಪ್ರಣಾಳಿಕೆಯ ಪ್ರಕಾರ (Universal declaration of rights) ಓದುಬರಹ ಕಲಿಯುವುದು ಪ್ರತಿಯೊಬ್ಬ ಮಾನವನ ಹಕ್ಕು. ಭಾರತ ಸರಕಾರದ ವಿದ್ಯಾಮಂತ್ರಿಗಳಾಗಿದ್ದ ಡಾ|| ವಿ. ಕೆ. ಆರ್. ವಿ. ರಾವ್, ಭಾರತದ ರಾಜ್ಯಾಂಗದಲ್ಲಿ ಈ ಪ್ರಣಾಳಿಕೆಯನ್ನು ಅಳವಡಿಸಬೇಕೆಂದು ಅಭಿಪ್ರಾಯಪಟ್ಟಿದ್ದರು. ಎಲ್ಲರೂ ಓದುಬರಹ ಕಲಿತು ಸುಶಿಕ್ಷಿತರಾಗಬೇಕು ಎಂಬ ಭಾವನೆ ಇಂದು ಬೆಳೆದಿದೆ. ಹಾಗೂ ಬೆಳೆಯುತ್ತಲಿದೆ. ಈ ಪರಿಸ್ಥಿತಿಯಲ್ಲಿ ಸಾಮಾನ್ಯ ಮಟ್ಟದ ಓದುಗರಿಗೂ ಸಹ ಪ್ರಕಟಿಸಿದ ಸಾಹಿತ್ಯ ಅರ್ಥವಾಗಬೇಕು. ಉದಾಹರಣೆಗೆ ಬೈಬಲ್ಲು, ಇಂಗ್ಲಿಷ್ ಬಲ್ಲ ಸಾಮಾನ್ಯ ಓದುಗರಿಗೂ ಅರ್ಥವಾಗುವ ಗ್ರಂಥ. ಇಂದು ಜ್ಞಾನಸ್ಫೋಟನೆ ಆಗುತ್ತಿದೆ. ಈ ಸನ್ನಿವೇಶದಲ್ಲಿ ರಚಿಸುವ ಸಾಹಿತ್ಯ ಪಾಮರರಂಜನೀಯವಾಗಿಯೂ ಇರಬೇಕು.

ಓದುವ ಹವ್ಯಾಸ ಬೆಳೆದಂತೆ ಓದುವುದರಲ್ಲಿ ಆಸಕ್ತಿ ಉಂಟಾಗುವುದು. ಕುತೂಹಲ ಕೆರಳುವುದು. ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿ ಸ್ವಾಭಾವಿಕವಾಗಿ ಉಂಟಾಗುವುದು. ಸಾಹಿತ್ಯ ಪ್ರೇಮ ಬೆಳೆಯುವುದು. ಪ್ರಾರಂಭದಿಂದಲೇ ವಯಸ್ಕ ಓದುಗರಿಗೆ ಓದುವುದರಲ್ಲಿ ಆಸಕ್ತಿ ಉಂಟಾಗುವಂತೆ ಸಾಹಿತ್ಯ ರಚಿಸುವ ಪ್ರಯತ್ನ ಮಾಡುವುದು ಒಳಿತು. ಈ ದೃಷ್ಟಿಯಿಂದ ಪ್ರಾರಂಭದಲ್ಲಿ ರಚಿಸಿದ ಸಾಹಿತ್ಯದಲ್ಲಿ ಭಾಷಾಡಂಬರ, ಅಲಂಕಾರ ಮುಂತಾದವುಗಳನ್ನು ಪ್ರದರ್ಶಿಸದೆ ಸರಳವಾಗಿ ಅರ್ಥವಾಗುವಂತೆ ಇರಬೇಕು. ಹಾಗಿಲ್ಲದಿದ್ದಲ್ಲಿ ಬರೆದ ಪುಸ್ತಕ ಬೇಸರ ತರಬಹುದು.

ವಿಷಯ ಮನಸ್ಸಿಗೆ ಹಿಡಿಯದಿರಬಹುದು.

ಭಾರತದಲ್ಲಿ ಇದುವರೆಗೆ ವಿವಿಧ ಭಾಷೆಗಳಲ್ಲಿ ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಹತ್ತು ಸಾವಿರ ಪುಸ್ತಕಗಳು ಪ್ರಕಟವಾಗಿವೆ. ಆದರೆ ಅವುಗಳನ್ನು ಶಾಸ್ತ್ರೀಯರೀತ್ಯಾ ಮೌಲ್ಯಮಾಪನೆ ಮಾಡಬೇಕಾಗಿದೆ. ಜೊತೆಗೆ ವಿವಿಧ ಭಾಷೆಗಳಲ್ಲಿ ಪ್ರಕಟವಾಗಿರುವ ಪುಸ್ತಕಗಳ ಗ್ರಂಥ ಸೂಚಿಯನ್ನು ರಚಿಸುವುದು ಒಳ್ಳೆಯದು. ಇದರಿಂದ ರಚಿಸಿದ ಪುಸ್ತಕಗಳು ಯಾವ ಯಾವ ವಿಷಯದಲ್ಲಿ ಪ್ರಕಟವಾಗಿವೆ ಎಂಬುದು ತಿಳಿಯುವುದು. ಬೇರೆಬೇರೆ ಭಾಷೆಗಳಲ್ಲಿ ಪ್ರಕಟವಾಗಿರುವ ಪುಸ್ತಕಗಳ ಗ್ರಂಥಸೂಚಿಯನ್ನು ರಚಿಸಿಕೊಂಡು ಅವುಗಳ ಅಧ್ಯಯನ ನಡೆಸಿದಲ್ಲಿ ಮುಂದೆ ಯಾವ ಬಗೆಯ ಪುಸ್ತಕಗಳು ನಮ್ಮಲ್ಲಿಲ್ಲ ಎಂಬುದು ಗೊತ್ತಾಗುತ್ತದೆ. ಅಲ್ಲದೆ ಹೊಸ ಪುಸ್ತಕಗಳನ್ನು ಬರೆಸುವುದಕ್ಕೆ ಇದರಿಂದ ಸಹಾಯ ಆಗುವುದು. ಮೇಲಾಗಿ ಇತರೇ ಯಾವುದೇ ಒಂದು ಭಾಷೆಯಲ್ಲಿ ಇರುವ ಉತ್ತಮ ಪುಸ್ತಕಗಳನ್ನು ಬೇರೆ ಭಾಷೆಗಳಿಗೆ ಭಾಷಾಂತರಿಸುವುದರಿಂದ ಆ ಪುಸ್ತಕಗಳ ಉಪಯೋಗ ಹೆಚ್ಚುವುದು.

## ಆಕರ ಸೂಚಿ

1) ಶಿಕ್ಷಣ ತತ್ವ — ಶ್ರೀ. ಟಿ. ವಿ. ತಿಮ್ಮೇಗೌಡ.

2) The techinque of clear writing

Robert Gunning

3) Word list inKannada for new literates
Mysore State Adult Education council
(report of research study)

4) Literature for new literates
Indian Adult education Association,
New Delhi

5) Study of the vocabulary of Marathi speaking new literates of the city of Bombay
Bombay city Adult Education commitee
Bombay 1959

## ಪುಸ್ತಕದ ಮೌಲ್ಯಮಾಪನೆ

ಬರೆದ ಲೇಖನ ಅಥವ ಪುಸ್ತಕ ಓದುಗರಿಗೆ ಉಪಯೋಗವಾಗಬೇಕು. ಇಲ್ಲದಿದ್ದರೆ ಬರಹಗಾರನ ಶ್ರಮ ವ್ಯರ್ಥ. ಅಂದರೆ ಬರೆದ ಲೇಖನ ಅಥವ ಪುಸ್ತಕಗಳನ್ನು ಓದುಗರು ಅರ್ಥಮಾಡಿಕೊಳ್ಳುವಂತಿರಬೇಕು. ಗ್ರಹಿಸಿದ ವಿಷಯಗಳನ್ನು ಅನಂತರ ಅವರು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಪುಸ್ತಕ ಬರಹಗಾರನ ಭಾವನೆಯ ಪ್ರತಿಬಿಂಬ. ಅನೇಕ ವೇಳೆ ಪುಸ್ತಕಗಳು ಬರಹಗಾರನ ವೈಯಕ್ತಿಕ ಪ್ರತಿಭೆ, ಶಬ್ದಾಡಂಬರ ಮತ್ತು ಪಾಂಡಿತ್ಯಜ್ಞಾನಗಳನ್ನು ಒಳಗೊಂಡಿರುವುವು. ಅನೇಕರು ತಮ್ಮ ಪುಸ್ತಕದಲ್ಲಿ ಕಠಿಣ ಭಾಷೆ ಮತ್ತು ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಬಳಸುವರು.

ಲೇಖನ ಅಥವಾ ಪುಸ್ತಕ ಓದಲು ಎಷ್ಟು ಸುಲಭ ಎಂಬುದನ್ನು ಪೂರ್ವಭಾವಿಯಾಗಿ ಪ್ರಯೋಗಾಲಯದಲ್ಲಿ ಅಳೆಯುವ ಕಾರ್ಯ 1920ರಲ್ಲಿ ಅಮೆರಿಕದಲ್ಲಿ ಪ್ರಾರಂಭವಾಯಿತು. ಇದಕ್ಕೆ ಮೂರು ಕಾರಣಗಳಿದ್ದವು. ಕಲಿಸುವ ವಿಧಾನ ವೈಜ್ಞಾನಿಕವಾಗಿರಬೇಕು. ಈ ಕಾರಣದಿಂದ ರಚಿಸಿದ ಪಠ್ಯಪುಸ್ತಕಗಳನ್ನು ಪ್ರಯೋಗಕ್ಕೆ ಗುರಿಪಡಿಸಲಾಯಿತು. ಪುಸ್ತಕದಲ್ಲಿನ ಬರವಣಿಗೆ ಎಷ್ಟರಮಟ್ಟಿನ ವೈಯಕ್ತಿಕ ಪ್ರತಿಭೆ ಮತ್ತು ಶಬ್ದಾಡಂಬರದಿಂದ ಕೂಡಿದೆ ಎಂಬುದನ್ನು ಕಂಡುಹಿಡಿಯುವುದೇ ಅದರ ಮುಖ್ಯ ಉದ್ದೇಶ. ಶಿಕ್ಷಣ ಕ್ಷೇತ್ರದಲ್ಲಿ ಪ್ರಕಟವಾದ ಪುಸ್ತಕಗಳು ಈ ತೆರನಾದ ಪ್ರಯೋಗಕ್ಕೆ ಗುರಿಯಾದುದು ಇದೇ ಮೊದಲು.

ಎರಡನೆಯದಾಗಿ ನೀಡುವ ಶಿಕ್ಷಣ ಅನುಭವವೇದ್ಯವಾಗಿರ

ಬೇಕು. ಕೇವಲ ಪುಸ್ತಕದ ಬದನೇಕಾಯಿ ಆಗಿರಬಾರದು. ಡ್ಯೂಯಿ, ಕಿಲ್‌ಪ್ಯಾಟ್ರಿಕ್ ಮತ್ತು ಥಾರನ್‌ಡೈಕ್ ಮುಂತಾದ ಶಿಕ್ಷಣತಜ್ಞರು ಮಕ್ಕಳ ಹಿತಾಸಕ್ತಿಗಳನ್ನು ಅರಿತಿದ್ದರು. ರಚಿಸುವ ಪಠ್ಯಪುಸ್ತಕಗಳು ಮತ್ತು ಪೂರಕ ಪುಸ್ತಕಗಳು ಶಾಲಾ ಮಕ್ಕಳ ಹಿತಾಸಕ್ತಿಗಳನ್ನು ಪೂರೈಸಬೇಕು ಎಂಬುದು ಅವರ ಅಭಿಪ್ರಾಯ ವಾಗಿತ್ತು. ಹಾಲಿ ಇರುವ ಪುಸ್ತಕಗಳು ಮಕ್ಕಳಿಗೆ ಎಷ್ಟರಮಟ್ಟಿಗೆ ಯೋಗ್ಯವಾದವು ಎಂಬ ಅಂಶವನ್ನು ವಿಶ್ಲೇಷಣೆ ಮಾಡತೊಡಗಿದರು.

ಕಡ್ಡಾಯ ಪ್ರಾಥಮಿಕಶಿಕ್ಷಣ ಜಾರಿಗೆ ಬಂದಿತ್ತು. ಶಿಕ್ಷಣ ಕ್ಷೇತ್ರ ವಿಸ್ತಾರವಾಗಿತ್ತು. ಇದರ ಪರಿಣಾಮವಾಗಿ ಪ್ರತಿಯೊಬ್ಬ ಶಾಲಾಬಾಲಕನ ವೈಯಕ್ತಿಕ ಪ್ರಗತಿಯ ಕಡೆ ಗಮನಕೊಡಬೇಕೆಂಬ ಭಾವನೆ ಮೂಡಿತು. ಮಕ್ಕಳ ಮಾನಸಿಕ ಪ್ರಗತಿ ವಯಸ್ಸಿಗನು ಗುಣವಾಗಿ ಅಭಿವೃದ್ಧಿ ಹೊಂದುವುದು. ಅಲ್ಲದೆ ಒಂದೇ ವಯಸ್ಸಿನ ವಿವಿಧ ಮಕ್ಕಳ ಮಾನಸಿಕ ಪ್ರಗತಿ ಒಂದೇ ತೆರನಾಗಿ ಇರದು ಎಂಬುದನ್ನು ಮನಶ್ಶಾಸ್ತ್ರಜ್ಞರು ಕಂಡುಹಿಡಿದಿದ್ದರು. ಆದ್ದರಿಂದ ರಚಿಸಿದ ಪಠ್ಯಪುಸ್ತಕ ಮತ್ತು ಪೂರಕ ಪುಸ್ತಕಗಳು ಬಹುಮಂದಿ ವಿದ್ಯಾರ್ಥಿಗಳ ಆಸೆ ಆಕಾಂಕ್ಷೆಗಳನ್ನು ಪೂರೈಸಬೇಕೆಂಬ ಅಭಿ ಪ್ರಾಯಮೂಡಿತು. ಶಾಲಾಮಕ್ಕಳಿಗಾಗಿ ಬರೆದ ಪುಸ್ತಕಗಳು ಆಯಾ ತರಗತಿಯ ವಿದ್ಯಾರ್ಥಿಗಳಿಗೆ ತಕ್ಕುದಾಗಿವೆಯೆ ಎಂಬು ದನ್ನು ಕಂಡುಹಿಡಿಯುವ ಪ್ರಯತ್ನ ನಡೆಯಿತು. ಅಲ್ಲದೆ ಪುಸ್ತಕ ಗಳಲ್ಲಿ ಕಂಡು ಬಂದ ನ್ಯೂನತೆಗಳನ್ನು ಸುಧಾರಿಸಲು ಪ್ರಯತ್ನಿಸ ಲಾಯಿತು.

ಈ ಹಿಂದೆ ಪುಸ್ತಕಗಳ ವಾಚನ ಮಟ್ಟವನ್ನು ನಿರ್ಧರಿಸಲು ಯಾವ ಮಾಪಕಗಳೂ ಇರಲಿಲ್ಲ. ಪುಸ್ತಕಭಂಡಾರದ ಅಧಿಕಾರಿ,

ಉಪಾಧ್ಯಾಯ, ಪ್ರಕಟಣಕಾರ ಇಲ್ಲವೇ ಸಂಪಾದಕನ ಅಭಿಪ್ರಾಯವೇ ಆಖೈರು ತೀರ್ಮಾನವಾಗಿತ್ತು. ಈ ತೀರ್ಮಾನ ಅವರ ಸ್ವಂತ ವಿವೇಚನೆಗೆ ಒಳಪಟ್ಟಿತ್ತೇ ಹೊರತು ಯಾವ ಶಾಸ್ತ್ರೀಯವಾದ ಆಧಾರಗಳೂ ಇರಲಿಲ್ಲ. ಥಾರನ್ ಡೈಕ್ ಎಂಬುವನು 1921ರಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಹತ್ತು ಸಾವಿರ ಪದಗಳ ಕೈಪಿಡಿಯನ್ನು ಉಪಾಧ್ಯಾಯರ ಉಪಯೋಗಕ್ಕೆ ಪ್ರಕಟಿಸಿದನು. ಆ ಪದಗಳು ಬಳಕೆಯಲ್ಲಿದ್ದ ಹಾಗೂ ಚಿರಪರಿಚಿತವಾದ ಪದಗಳು. ಅವುಗಳನ್ನು ಹತ್ತು ಗುಂಪುಗಳನ್ನಾಗಿ ವಿಂಗಡಿಸಿದನು. ಪರಿಚಯ ಸಂಖ್ಯಾ ಪ್ರಮಾಣವೇ ಇದಕ್ಕೆ ಆಧಾರ. ಈ ಆಧಾರದ ಮೇಲೆ ಮೊದಲನೇ ಒಂದು ಸಾವಿರ, ಎರಡನೇ ಒಂದು ಸಾವಿರ, ಹೀಗೆ ಹತ್ತು ಗುಂಪುಗಳನ್ನೂ ಮಾಡಿದನು.

ಅನೇಕ ಉಪಾಧ್ಯಾಯರುಗಳು ಜ್ಯೂನಿಯರ್ ಹೈಸ್ಕೂಲು ವಿದ್ಯಾರ್ಥಿಗಳಿಗೆ ರಚಿತವಾದ ಪಠ್ಯಪುಸ್ತಕಗಳು ಹೆಚ್ಚಿನ ತಾಂತ್ರಿಕ ಪದಗಳಿಂದ ಕೂಡಿವೆ ಎಂದು ಅಭಿಪ್ರಾಯ ಪಟ್ಟರು. ಈ ಕಾರಣದಿಂದ ಆ ಪುಸ್ತಕಗಳು ಸಂಬಂಧಪಟ್ಟ ವಿದ್ಯಾರ್ಥಿಗಳ ಮಟ್ಟಕ್ಕೆ ಮೀರಿದ್ದು ಎಂಬ ಅಂಶವನ್ನೂ ಸಹ ಸೂಚಿಸಿದರು. ಅಂತಹ ಪುಸ್ತಕಗಳ ವಿಶ್ಲೇಷಣೆಯನ್ನು ಲೈವ್ಲಿ ಮತ್ತು ಪ್ರೆಸ್ಸಿ ಎಂಬುವರು ಕೈಕೊಂಡರು. ವಿಶ್ಲೇಷಿಸಲು ಥಾರನ್ ಡೈಕ್ ಅವರ ಪದ ಪಟ್ಟಿಯನ್ನೇ ಆಧಾರವಾಗಿಟ್ಟುಕೊಂಡರು. 11 ಪುಸ್ತಕಗಳನ್ನು ಮತ್ತು ಒಂದು ಸ್ಥಳೀಯ ವೃತ್ತಪತ್ರಿಕೆಯನ್ನು ಮೌಲ್ಯಮಾಪನೆ ಮಾಡಿದರು. ಈ ರೀತಿ ಮಾಡಲು ಯಾವುದಾದರೂ ಒಂದು ಪುಸ್ತಕದಿಂದ (random sampling) 1000 ಪದಗಳಿಂದ ಕೂಡಿದ ಮಾದರಿಯ ಪದಗಳ ಕ್ಲಿಷ್ಟತೆಯನ್ನು ಕಂಡುಹಿಡಿದು ಇಡೀ

ಪುಸ್ತಕದ ಬಗ್ಗೆ ಬೆಲೆಕಟ್ಟಬಹುದು ಎಂದು ಅಭಿಪ್ರಾಯಪಟ್ಟರು.

ಮಕ್ಕಳು ಓದುವ ಪುಸ್ತಕಗಳು ಯಾವುವು? ಯಾವ ಹಂತದ ಮಕ್ಕಳು ಎಂತಹ ಪುಸ್ತಕಗಳನ್ನು ಅಪೇಕ್ಷಿಸುವರು ಎಂಬ ವಿಷಯವಾಗಿ ವಿನೆಟ್ಕಾ ಎಂಬುವರು ಸಂಶೋಧನೆ ನಡೆಸಿದರು. ಈ ಪ್ರಯೋಗವನ್ನು 30 ಸಾವಿರ ಮಕ್ಕಳ ಮೇಲೆ ನಡೆಸಲಾಯಿತು. ಅದರ ಪ್ರಕಾರ ಸಂಶೋಧನೆ ನಡೆದ ಸಾಲಿನಲ್ಲಿ ಮಕ್ಕಳು ಓದಿರುವ ಪುಸ್ತಕಗಳನ್ನು ಹಾಗು ಓದಲಿಚ್ಛಿಸಿದ ಪುಸ್ತಕಗಳ ಪಟ್ಟಿಯನ್ನು ಮಕ್ಕಳೇ ಮಾಡಿಕೊಡಬೇಕಾಗಿತ್ತು. ಆ ರೀತಿ ಎಲ್ಲ ಮಕ್ಕಳು ಪಟ್ಟಿಗಳನ್ನು ಬರೆದು ಕೊಟ್ಟರು. ಅವುಗಳನ್ನೆಲ್ಲಾ ಕ್ರೋಢೀಕರಿಸ ಲಾಯಿತು. ಪ್ರತಿಯೊಂದು ಪುಸ್ತಕವನ್ನು 25 ಮಕ್ಕಳಿಗೆ ಕಡಮೆ ಇಲ್ಲದಂತೆ ಹೆಸರಿಸಿದ್ದರು. ಕಡೆಯಲ್ಲಿ 700 ವಿವಿಧ ಪುಸ್ತಕಗಳ ಪಟ್ಟಿ ದೊರಕಿತು. ಅವುಗಳ ಹೆಸರು, ಪ್ರತಿಯೊಂದು ಪುಸ್ತಕದ ಸಂಕ್ಷಿಪ್ತ ವಿವರಣೆ, ಅವುಗಳ ಮಟ್ಟ ಮುಂತಾದ ವಿವರಣೆಗಳನ್ನು ಒಳಗೊಂಡ ಒಂದು ಗ್ರಂಥ ಸೂಚಿಯನ್ನು ಪ್ರಕಟಿಸಲಾಯಿತು. ಅವುಗಳನ್ನು ಉಪಾಧ್ಯಾಯರು, ಪುಸ್ತಕಭಂಡಾರದ ಅಧಿಕಾರಿಗಳು ಮತ್ತು ಪೋಷಕರಿಗೆ ಹಂಚಿದರು. ಮೂರನೆಯ ತರಗತಿಯಿಂದ 9ನೇ ತರಗತಿಯವರೆಗಿನ ವಿದ್ಯಾರ್ಥಿಗಳಿಗೆ ಬೇಕಾದ ಪುಸ್ತಕ ಗಳನ್ನು ಆಯ್ಕೆ ಮಾಡಲು ಈ ಗ್ರಂಥ ಸೂಚಿ ಸಹಾಯಕವಾಯಿತು.

ವಿನೆಟ್ಕ ತಯಾರಿಸಿದ 700 ಪುಸ್ತಕಗಳ ಗ್ರಂಥ ಸೂಚಿ ಯಿಂದ' ವಾಷ್‌ಬರ್ನ್ ಮತ್ತು ವೊಗೇಲ್ ಎಂಬುವರು 150 ಪುಸ್ತಕಗಳನ್ನು ಆಯ್ಕೆಮಾಡಿಕೊಂಡರು. ಈ ಪುಸ್ತಕಗಳಿಂದ 1000 ಪದಗಳಿಂದ ಕೂಡಿದ ವಿವಿಧ ಮಾದರಿಗಳನ್ನು ಆಯ್ಕೆ ಮಾಡಿಕೊಂಡರು. ಆ ಮಾದರಿಗಳನ್ನು ವಿದ್ಯಾರ್ಥಿಗಳಿಂದ ಓದಿಸಿ

ಪರಿಶೀಲಿಸಿದರು. ಪರಿಶೀಲನೆಗೆ ಮೂರು ಅಂಶಗಳನ್ನು ತಮ್ಮ ಗಮನದಲ್ಲಿ ಇಟ್ಟುಕೊಂಡರು. ಅವು (1) ಪ್ರತಿ ಒಂದು ಸಾವಿರದ ಪದಗಳಿಂದ ಕೂಡಿದ ಮಾದರಿಯಲ್ಲಿ ಬಳಕೆ ಮಾಡಿರುವ ವಿವಿಧ ಪದಗಳ ಸಂಖ್ಯೆ. (2) ಥಾರನ್ ಡೈಕ್ ಪದಪಟ್ಟಿಯಲ್ಲಿ ಮೊದಲನೇ 1500 ಪದಗಳಲ್ಲಿ ಕಾಣಬರುವ ಪದಗಳ ಸಂಖ್ಯೆ(3) 75 ಮಾದರಿ ವಾಕ್ಯಗಳಲ್ಲಿ ಸರಳ ವಾಕ್ಯಗಳ ಸಂಖ್ಯೆ. ಈ ಸಂಶೋಧನೆಗೂ ಮತ್ತು ಇನ್ನಿತರ ಸಂಶೋಧನೆಗಳಿಗು ಒಂದು ವ್ಯತ್ಯಾಸ ಇದೆ. ಇತರ ಸಂಶೋಧನೆಗಳಲ್ಲಿ ಪುಸ್ತಕಗಳ ಹಂತವನ್ನು ಕೇವಲ ಕಣ್ಣಿನ ನೋಟದಿಂದ ಅಥವಾ ಮನಸ್ಸಿನ ವಿವೇಚನೆಯಿಂದ ನಿರ್ಧರಿಸಲಾಗುತ್ತಿತ್ತು. ಆದರೆ ಈ ಶಂಶೋಧನೆಯಲ್ಲಿ ಪುಸ್ತಕದ ಹಂತವನ್ನು ವೈಜ್ಞಾನಿಕವಾಗಿ ನಿರ್ಧರಿಸಲಾಯಿತು. ಪುಸ್ತಕದ ಹಂತವನ್ನು ನಿರ್ಧರಿಸಲು ಭಾಷೆ, ಶೈಲಿಗಳ ಜೊತೆಗೆ ಅವುಗಳಲ್ಲಿರುವ ಚಿತ್ರ ಮತ್ತು ವಿಷಯ ಮತ್ತು ಅವುಗಳ ವ್ಯಾಪ್ತಿ–ಇವುಗಳು ಸಹಾಯಕವಾಗುವುವು. ಆದರೂ ಪುಸ್ತಕಗಳ ಹಂತವನ್ನು ನಿರ್ಧರಿಸುವ ಪ್ರಯತ್ನವನ್ನು ಮೊದಲಾಗಿ ಪ್ರಾರಂಭಿಸಿದವರು ಇವರೇ.

1934ರಲ್ಲಿ ಪ್ರೋಢರ ಶಿಕ್ಷಣಕ್ಕೆ ಸಂಬಂಧಪಟ್ಟ ವಿಷಯಗಳನ್ನು ಓಜ್‌ಮನ್ ವಿಶ್ಲೇಷಿಸಿದನು. ವಯಸ್ಕರ ಓದುವ ಆಸಕ್ತಿಗೆ ಸಂಬಂಧಪಟ್ಟ ವಿಷಯಗಳನ್ನು ಸಂಶೋಧನೆ ಮಾಡಲು ಆಯ್ಕೆ ಮಾಡಿಕೊಂಡದ್ದು ಇದೇ ಮೊದಲು. ಜೊತೆಗೆ ವಿಷಯಗಳ ಅರ್ಥಗ್ರಹಣೆಯ ಮೂಲಕ ಅವುಗಳ ಮಟ್ಟವನ್ನು ಗೊತ್ತುಮಾಡಿದುದು ಒಂದು ವೈಶಿಷ್ಟ್ಯ. ನಿಯತಕಾಲಿಕ ಪತ್ರಿಕೆಗಳಿಂದ 16 ವಿಷಯಗಳನ್ನು ಆಯ್ಕೆ ಮಾಡಿಕೊಂಡನು. ಪ್ರತಿಯೊಂದು ವಿಷಯವೂ ಸರಾಸರಿ 500 ಪದಗಳಿಂದ ಕೂಡಿತ್ತು. ಅನುಭವವೇದ್ಯವಾದ

ಊಟ, ಸ್ನಾನ, ಆಟದ ಮೈದಾನಗಳಿಗೆ ಸಂಬಂಧಪಟ್ಟ ವಿಷಯಗಳು ವಯಸ್ಕರಿಗೆ ಅರ್ಥಮಾಡಿಕೊಳ್ಳಲು ಸುಲಭ. ಅನುಭವವೇದ್ಯವಲ್ಲದ ಹಾಗೂ ಭಾವನಾತ್ಮಕವಾದ ವಿಷಯಗಳು ಅರ್ಥಮಾಡಿಕೊಳ್ಳಲು ಕಷ್ಟವಾಗಿ ಕಂಡು ಬಂದವು.

## ಡೇಲ್ ಮತ್ತು ಟೈಲರ್

ಎಡ್ಗರ್ ಡೇಲ್ ಮತ್ತು ರ್ಯಾಲ್ಫ್. ಡಬ್ಲು. ಟೈಲರ್ ಸ್ವಲ್ಪ ಮಟ್ಟಿಗೆ ಓದುಬರಹ ಬಲ್ಲ ವಯಸ್ಕರನ್ನೇ ಸಂಶೋಧನೆಗೆ ಆರಿಸಿಕೊಂಡರು. ವೃತ್ತಪತ್ರಿಕೆಗಳು, ನಿಯತಕಾಲಿಕ ಪತ್ರಿಕೆಗಳು ಮತ್ತು ಮಕ್ಕಳಿಗಾಗಿ ಬರೆದ ಪುಸ್ತಕಗಳಿಂದ ಜನರ ಆರೋಗ್ಯಕ್ಕೆ ಸಂಬಂಧಪಟ್ಟ 74 ವಿಷಯಗಳನ್ನು ಆರಿಸಿಕೊಂಡರು. ಇವುಗಳನ್ನು ಪುನಃ ಸುಧಾರಿಸಿ ಬರೆದು ವಯಸ್ಕರಿಂದ ಓದಿಸಲಾಯಿತು. ಆ ವಿಷಯಗಳು ಅವರಿಗೆ ಎಷ್ಟರಮಟ್ಟಿಗೆ ಅರ್ಥವಾಗಿವೆ ಎಂಬುದನ್ನು ಪ್ರಶ್ನೆಗಳ ಮೂಲಕ ಉತ್ತರಗಳನ್ನು ಪಡೆದು ತಿಳಿಯಲಾಯಿತು. ವಯಸ್ಕರ ಆಸಕ್ತಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ಕೆಮಾಡಿ ಅವರ ಮಟ್ಟಕ್ಕೆ ಸುಧಾರಿಸಿ ಬರೆದು ಪ್ರಯೋಗಿಸಿದ್ದು ಒಂದು ವೈಶಿಷ್ಟ್ಯ.

## ಗ್ರೇ ಮತ್ತು ಲೀರಿ

ವಿಲಿಯಂ. ಎಸ್. ಗ್ರೇ ಮತ್ತು ಬರ್ನಿಸ್. ಇ. ಲೀರಿ ವಸ್ತುವಿನ ಕಠಿಣತೆಯನ್ನು ನಿರ್ಧರಿಸುವ ಅಂಶಗಳನ್ನು ಕಂಡುಹಿಡಿಯಲು ಸಂಶೋಧನೆ ಮುಂದುವರಿಸಿದರು. ಅವರು ಜನಪ್ರಿಯವಾಗಿರುವ ಕಾದಂಬರಿಗಳು, ವೃತ್ತಪತ್ರಿಕೆ ಮತ್ತು ನಿಯತಕಾಲಿಕ ಪತ್ರಿಕೆಗಳನ್ನು ಆರಿಸಿಕೊಂಡರು. ಈ ವಸ್ತುಗಳಲ್ಲಿ ಅರ್ಥಭಾಗ

ಕಾದಂಬರಿಗಳು. ಈ ಎಲ್ಲಾ ವಸ್ತುಗಳಿಂದಲೂ ಒಟ್ಟಾಗಿ 48 ವಿಷಯಗಳನ್ನು ಆಯ್ಕೆ ಮಾಡಿಕೊಂಡರು. ಪ್ರತಿಯೊಂದು ವಿಷಯದಲ್ಲಿ ಸರಾಸರಿ 100 ಪದಗಳಿದ್ದವು. ಈ ರೀತಿ ಆಯ್ಕೆ ಮಾಡಿದ ವಿಷಯಗಳನ್ನು 800 ವಯಸ್ಕರ ಮೇಲೆ ಪ್ರಯೋಗಿಸಲಾಯಿತು. ಅವರು ಅವುಗಳನ್ನು ಎಷ್ಟರಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲರು ಎಂಬುದನ್ನು ತಿಳಿಯಲಾಯಿತು. ವಾಚನಶಕ್ತಿಯನ್ನು ನಿರ್ಧರಿಸಲು 82 ಅಂಶಗಳು ಕಾರಣ. ಅವುಗಳನ್ನು ನಾಲ್ಕು ವಿಶಾಲವಾದ ಗುಂಪುಗಳನ್ನಾಗಿ ಮಾಡಿದರು. – ಪದಗಳ ಲಕ್ಷಣ, ವಾಕ್ಯಗಳ ಲಕ್ಷಣ, ವಾಕ್ಯವೃಂದಗಳ ಲಕ್ಷಣ ಮತ್ತು ಆಯ್ಕೆ ಮಾಡಿಕೊಂಡ ಇಡೀ ವಿಷಯದ ಒಟ್ಟಾರೆ ಗುಣ. 82 ಅಂಶಗಳಲ್ಲಿ ಪ್ರಯೋಗದ ಒರೆಗಲ್ಲಿಗೆ ಸಿಗಲಾರದ 18 ಅಂಶಗಳನ್ನು ಅನಾವಶ್ಯಕ ಎಂದುಬಿಡಲಾಯಿತು. ಆಯ್ಕೆಮಾಡಿಕೊಂಡ ವಸ್ತುಗಳ ಮಾದರಿಯ ಅರ್ಧ ಭಾಗದಲ್ಲಿ 20 ಅಂಶಗಳು ಕೇವಲ ಒಂದು ಬಾರಿ ಮಾತ್ರ ಕಂಡು ಬಂದವು. ಉಳಿದ 44 ಅಂಶಗಳಲ್ಲಿ 20 ಅಂಶಗಳು ಮಾತ್ರ ವಯಸ್ಕಓದುಗರ ವಾಚನಶಕ್ತಿಗೆ ಸಂಬಂಧಪಟ್ಟವು ಎಂಬುದನ್ನು ಪ್ರಯೋಗದಿಂದ ಗೊತ್ತುಪಡಿಸಿಕೊಂಡರು. ಅಲ್ಲದೆ ಅವು ಹೆಚ್ಚಾಗಿ ಪದಗಳ ಕ್ಲಿಷ್ಟತೆಗೆ ಸಂಬಂಧಪಟ್ಟವು. ಅಂದರೆ ವಾಕ್ಯದ ಸರಾಸರಿ ಉದ್ದ (ವಾಕ್ಯದಲ್ಲಿ ಇರುವ ಪದಗಳ ಸಂಖ್ಯೆ) ವಾಕ್ಯದಲ್ಲಿರುವ ಸರಾಸರಿ ಅಕ್ಷರಗಳ ಸಂಖ್ಯೆ (syllables) ಸರಳವಾದ ವಾಕ್ಯಗಳ ಸಂಖ್ಯೆ, ವಾಕ್ಯವೃಂದದಲ್ಲಿರುವ ವಾಕ್ಯಗಳ ಸಂಖ್ಯೆ, ಉಪಸರ್ಗಗಳ ಸಂಖ್ಯೆ, ಮತ್ತುವಿಚಾರಗಾಢತೆ.[1]

---

1 ತಿಳಿಸುವ ವಿಷಯ ಓದುಗನ ಮಟ್ಟಕ್ಕೆ ಮೀರಿದ್ದೆ? ಅವನು ಅದನ್ನು ಅರ್ಥಮಾಡಿಕೊಳ್ಳಬಲ್ಲನೆ ಎಂಬುದನ್ನು ಸೂಚಿಸಲು ವಿಚಾರ ಗಾಢತೆ ಎಂದು ಉಪಯೋಗಿಸಿದೆ.

ಅತ್ಯುತ್ತಮ ಓದುಗರ ವಾಚನಶಕ್ತಿಯನ್ನು ಪದಸಂಪತ್ತಿಗಿಂತಲೂ ಹೆಚ್ಚಾಗಿ ವಾಕ್ಯದ ಉದ್ದ ಮತ್ತು ಅದರ ರಚನೆ ನಿರ್ಧರಿಸುವುದು. 20 ಅಂಶಗಳ ಪೈಕಿ 13 ಅಂಶಗಳು ಅತಿ ಉತ್ತಮ ಓದುಗರ ವಾಚನ ಶಕ್ತಿಯನ್ನು ನಿರ್ಧರಿಸುವುವು. ಸಾಮಾನ್ಯವಾಗಿ ಎಲ್ಲಾ ಓದುಗರ ವಾಚನಶಕ್ತಿಯನ್ನು ನಿರ್ಧರಿಸುವ ಅಂಶಗಳು 20. ಕನಿಷ್ಠ ಮಟ್ಟದ ಓದುಗರ ವಾಚನಶಕ್ತಿಯನ್ನು ನಿರ್ಧರಿಸಲು 24 ಅಂಶಗಳು ಸಹಾಯಕವಾಗುವುವು. ಕನಿಷ್ಠ ಮಟ್ಟದ ಓದುಗರ ಮೇಲೆ ಪದಗಳ ಬಳಕೆ ಹೆಚ್ಚಿನ ಪರಿಣಾಮ ಉಂಟುಮಾಡುವುವು. ವಾಕ್ಯರಚನೆ ಮತ್ತು ವೈಯಕ್ತಿಕ ಸಂಭೋದನೆಯ ಅಂಶಗಳು ಅವರ ಮೇಲೆ ಕಡಮೆ ಪ್ರಭಾವವನ್ನು ಬೀರುವುವು.

### ಲೋರ್ಜ್

ಇರ್ವಿಂಗ್‌ಲೋರ್ಜ್ ವಾಚನ ಶಕ್ತಿಯ ಮೌಲ್ಯಮಾಪಕಗಳನ್ನು ಸರಳಮಾಡಲು ಪ್ರಯತ್ನಪಟ್ಟನು. ವಾಕ್ಯಗಳ ಸರಾಸರಿ ಉದ್ದ, ಕ್ಲಿಷ್ಟ ಪದಗಳ ಸಂಖ್ಯೆ, ಉಪಸರ್ಗಗಳಿಂದ ಕೂಡಿದ ಪದಪುಂಜಗಳು–ಇವು ಮೂರು ಮುಖ್ಯವಾದ ಅಂಶಗಳು ಮೌಲ್ಯಮಾಪನೆಗೆ ಸಹಾಯಕವಾಗುವುವು ಎಂಬುದನ್ನು ನಿರ್ಧರಿಸಿದನು.

### ಫ್ಲೆಷ್

ಕೊಲಂಬಿಯ ವಿಶ್ವವಿದ್ಯಾನಿಲಯದ ಉಪಾಧ್ಯಾಯರ ಕಾಲೇಜು ಸಾಮಾನ್ಯ ಮಟ್ಟದ ವಯಸ್ಕ ಓದುಗರ ವಾಚನಶಕ್ತಿಯನ್ನು ಗೊತ್ತುಮಾಡುವ ಕಾರ್ಯದಲ್ಲಿ ತೊಡಗಿತ್ತು. ಸುಮಾರು 1940ರಲ್ಲಿ ರೂಡಾಲ್ಫ್ ಫ್ಲೆಷ್ ಸಹ ಈ ಕಾರ್ಯದಲ್ಲಿ ತೊಡಗಿದನು.

ಆತನು ಹಾಲಿ ಚಾಲ್ತಿಯಲ್ಲಿದ್ದ ಸೂತ್ರಗಳನ್ನೇ ಅನ್ವಯಮಾಡಿ ಕೆಲವು ನಿರ್ಧಾರಗಳನ್ನು ಕೈಕೊಂಡನು. ಹೊಸದಾಗಿ ಅಕ್ಷರಸ್ಥ ರಾದ ವಯಸ್ಕರ ಓದುವಿಕೆಯ ಮೇಲೆ ಪದಗಳ ಕಠಿಣತೆ ಪರಿಣಾಮ ಉಂಟುಮಾಡಬಹುದು. ಆದರೆ ಪ್ರಾಥಮಿಕ ಶಾಲಾ ಐದನೇ ತರಗತಿಯ ಮಟ್ಟದ ಅಭ್ಯಾಸ ಇರುವ ಅಂದರೆ ಕ್ರಿಯಾತ್ಮಕ ಸಾಕ್ಷ ರಸ್ಥ ವಯಸ್ಕರ ಮೇಲೆ ಪದಗಳ ಕಠಿಣತೆ ಪ್ರಭಾವ ಬೀರದು. ಅಥವಾ ಅದರ ಪ್ರಭಾವ ಕಡಮೆ ಎಂಬುದಾಗಿ ವ್ಯಕ್ತಪಡಿಸಿದನು.

ಉತ್ತಮ ಮತ್ತು ಕನಿಷ್ಠ ಮಟ್ಟದ ಓದುಗರ ಮೇಲೆ ವಾಕ್ಯದ ಉದ್ದ ಪ್ರಭಾವ ಬೀರುವುದು. ಜೊತೆಗೆ ಭಾವನಾತ್ಮಕ ವಾದ ಪದಗಳು ಅರ್ಥಗ್ರಹಣದ ಮೇಲೆ ಪರಿಣಾಮವನ್ನು ಉಂಟು ಮಾಡುವುವು ಎಂಬುದು ಫ್ಲೆಷ್ ಅಭಿಪ್ರಾಯ. ಅವನು ವಯಸ್ಕರ ಆಸಕ್ತಿಯುಳ್ಳ ಕೆಲವು ನಿಯತಕಾಲಿಕ ಪತ್ರಿಕೆಗಳನ್ನು ಆರಿಸಿಕೊಂಡನು. ಆಯ್ಕೆ ಮಾಡಿಕೊಂಡ ಮಾದರಿಗಳಲ್ಲಿ ಪೂರ್ವ ಪ್ರತ್ಯಯಗಳನ್ನು ಅಂದರೆ ವ್ಯಾಕರಣ ಸಿದ್ಧವಾದ ಪದಗಳನ್ನು ಎಣಿಕೆ ಮಾಡಿ ವಸ್ತುವಿನ ಕಾಠಿಣ್ಯತೆಯನ್ನು ಗೊತ್ತುಪಡಿಸಿದನು. ಈ ರೀತಿ ಸರಳ ಎಂದು ಕಂಡುಬಂದ ಪತ್ರಿಕೆಗಳನ್ನು ಕಡಮೆ ಓದಿದ ವರು, ಕಠಿಣ ಎಂದು ಕಂಡುಬಂದ ಪತ್ರಿಕೆಗಳನ್ನು ಹೆಚ್ಚಿನ ಶಿಕ್ಷಣ ಪಡೆದ ವಯಸ್ಕರು ಓದುತ್ತಿರುವುದು ಕಂಡುಬಂದಿತು. ಅಂದರೆ ಫ್ಲೆಷ್ ಸೂತ್ರದ ಪ್ರಯೋಗದಿಂದ ಕಂಡು ಬಂದ ಫಲಿತಾಂಶಕ್ಕೂ ಮತ್ತು ಹಾಲಿ ಇದ್ದ ವಾಸ್ತವ ಪರಿಸ್ಥಿತಿಗೂ ಹೊಂದಾಣಿಕೆ ಕಂಡು ಬಂದಿತು.

1943ರಲ್ಲಿ ಫ್ಲೆಷ್ ಸೂತ್ರವನ್ನು ವೃತ್ತಪತ್ರಿಕೆಗಳಿಗೂ ಅನ್ವಯಿಸಲಾಯಿತು. ದಿನಪತ್ರಿಕೆಗಳಿಗಿಂತ ಭಾನುವಾರದ ವಿಶೇಷ

ವಾರ್ತಾ ವಿಭಾಗ ಓದಲು ಸರಳವಾಗಿ ಇರುವುದಾಗಿ ಕಂಡು ಬಂದಿತು. ಫ್ಲೆಷ್ ಆಟ್ಸೈರಾಗಿ ಒಂದು ಸೂತ್ರವನ್ನು ಕಂಡು ಹಿಡಿದನು. ಅದರ ಪ್ರಕಾರ ವಾಕ್ಯರಚನೆ ಮತ್ತು ವಿಷಯದಲ್ಲಿ ಆಸಕ್ತಿ ಈ ಎರಡು ಅಂಶಗಳನ್ನು ತನ್ನ ಸೂತ್ರದಲ್ಲಿ ಅಳವಡಿಸಿದನು. ಇದುವರೆಗೆ ವಿಷಯದ ಆಸಕ್ತಿಯನ್ನು ಕಂಡು ಹಿಡಿಯಲು ಯಾವ ಪ್ರಯತ್ನಗಳೂ ನಡೆದಿರಲಿಲ್ಲ. ಇದೊಂದು ಈ ಸೂತ್ರದ ವೈಶಿಷ್ಟ್ಯ.

1944ರಲ್ಲಿ ರಾಬರ್ಟ್ ಗನ್ನಿಂಗ್ ಒಂದು ಸೂತ್ರ ರಚಿಸಿದನು. ಅವನು ಸೂತ್ರದಲ್ಲಿ ವಾಕ್ಯದ ಸರಾಸರಿ ಉದ್ದ ಮತ್ತು ಪದಗಳ ಕಠಿಣತೆಗೆ ಪ್ರಾಧಾನ್ಯತೆ ನೀಡಿರುವನು. ವಿಷಯದ ಅರ್ಥ ಗ್ರಹಣ ವನ್ನು ತಿಳಿದು ಪುಸ್ತಕವನ್ನು ಸಂಬಂಧಪಟ್ಟ ತರಗತಿಯ ಮಟ್ಟಕ್ಕೆ ಸೇರಿಸಬಹುದು ಎಂಬುದು ಡೇಲ್ ಚಾಲ್ ಸೂತ್ರದ ಮುಖ್ಯಾಂಶ.

## ವೃತ್ತಪತ್ರಿಕಾ ಕ್ಷೇತ್ರದಲ್ಲಿ ನಡೆದಿರುವ ಕಾರ್ಯ

ಪಠ್ಯಪುಸ್ತಕ ಮತ್ತು ಪೂರಕ ಪುಸ್ತಕಗಳ (Supplementary reading materials) ವಾಚನಶಕ್ತಿಯನ್ನು ಕಂಡುಹಿಡಿದರೆ ಸಾಲದು. ಶಾಲಾಮಕ್ಕಳ ಶಿಕ್ಷಣದ ದೃಷ್ಟಿಯಿಂದ ಇದು ಒಂದು ಒಳ್ಳೆಯ ಕಾರ್ಯವೇ ಸರಿ. ಕೇವಲ ಹೊಸದಾಗಿ ಅಕ್ಷರಸ್ಥರಾದ ಪುರಸ್ಕರ ಸಾಹಿತ್ಯಕ್ಕೆ ಸೀಮಿತಗೊಳಿಸಿದರೂ ಸಾಲದು. ಜೀವನದ ನಾನಾಕ್ಷೇತ್ರಗಳಲ್ಲಿ ಪ್ರಚಲಿತವಾಗಿರುವ ಸಾಹಿತ್ಯದ ಮೌಲ್ಯ ಮಾಪನೆ ಮಾಡಬೇಕು. ನ್ಯೂನತೆಗಳು ಕಂಡುಬಂದಲ್ಲಿ ಅವುಗಳನ್ನು ಕೂಡಲೇ ಸುಧಾರಿಸಬೇಕು. ವಿದ್ಯಾರ್ಥಿಗಳು ಶಾಲಾ ಕಾಲೇಜು ಗಳಲ್ಲಿ ಭಾಷೆ ಅಭ್ಯಾಸ ಮಾಡುವುದರ ಜೊತೆಗೆ ಹೆಚ್ಚಿನ ಜ್ಞಾನ ಸಂಗ್ರಹದಲ್ಲಿ ತೊಡಗುವರು.

ವಿಜ್ಞಾನ ಮುಂದುವರಿಯುತ್ತಿದೆ. ಅದರ ಪರಿಣಾಮವಾಗಿ ಕೈಗಾರಿಕೆ ಪ್ರಗತಿ ಆಗುತ್ತಿದೆ. ಉತ್ಪನ್ನ ಹೆಚ್ಚುತ್ತಲಿದೆ. ವಿಜ್ಞಾನದ ಮುನ್ನಡೆ ಇದಕ್ಕೆ ಪೋಷಕವಾಗುತ್ತಲಿದೆ. ವೈಜ್ಞಾನಿಕ ಮುನ್ನಡೆಯ ಪರಿಣಾಮವಾಗಿ ಉತ್ಪನ್ನದ ಹೊಸ ಹೊಸ ತಂತ್ರಗಳು ಬೆಳಕಿಗೆ ಬರುತ್ತಿವೆ. ಈ ವೈಜ್ಞಾನಿಕ ಮುನ್ನಡೆಯನ್ನು ಜನಸಾಮಾನ್ಯರಿಗೆ ಸರಳ ಭಾಷೆಯಲ್ಲಿ ಹೇಳಬೇಕು. ಹೊಸದಾಗಿ ಅಕ್ಷರಸ್ಥರಾದ ವಯಸ್ಕರು ಸಹ ಈ ಜ್ಞಾನಸಂಗ್ರಹ ಕಾರ್ಯದಲ್ಲಿ ಭಾಗಿಗಳು. ಪತ್ರಿಕೆಗಳು ಜನಸಾಮಾನ್ಯಕ್ಕೆ ಪರಿಣಾಮಕಾರಿಯಾಗಿ ತಿಳಿವಳಿಕೆ ನೀಡುವ ಮಾಧ್ಯಮಗಳು. ಈ ಮಾಧ್ಯಮಗಳ ಮೂಲಕ ತಜ್ಞರಾದ ಡಾಕ್ಟರರು, ಇಂಜಿನೀಯರರು, ಆರ್ಥಿಕ ಪ್ರವೀಣರು ಮತ್ತು ಸಮಾಜಕಾರ್ಯಕರ್ತರು ಜನತಾ ಸಂಪರ್ಕ ಬೆಳೆಸಿಕೊಳ್ಳಬೇಕು. ಹಾಗೂ ಅವರಿಗೆ ತಿಳಿವಳಿಕೆ ನೀಡಬೇಕು. ಈ ಕಲೆಯನ್ನು ಅಭ್ಯಾಸ ಮಾಡದಿದ್ದಲ್ಲಿ ಜನತೆಯನ್ನು ಅವರೊಡನೆ ಪ್ರಗತಿಯ ಮಾರ್ಗದಲ್ಲಿ ಕೊಂಡೊಯ್ಯಲು ಆಗದು. ಈ ಕಾರ್ಯ ಅಗತ್ಯವಾಗಿ ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಆಗಬೇಕಾಗಿದೆ.

ಎಲ್ಲ ಕಾಲಕ್ಕೂ ವೃತ್ತಪತ್ರಿಕೆಗಳು ಪ್ರಬಲವಾದ ಪ್ರಚಾರ ಮಾಧ್ಯಮಗಳು. ವಿದ್ಯೆ ಹೆಚ್ಚಿದಂತೆಲ್ಲ ವೃತ್ತಪತ್ರಿಕೆಗಳನ್ನು ಓದುವವರ ಸಂಖ್ಯೆಯೂ ಸಹ ಹೆಚ್ಚುವುದು. ಮೈಸೂರು ರಾಜ್ಯದಲ್ಲಿ ಶೇಕಡ 31.5 ಮಂದಿ ಅಕ್ಷರಸ್ಥರಿರುವರು. ಈ ರಾಜ್ಯದಲ್ಲಿ ವೃತ್ತಪತ್ರಿಕೆಗಳನ್ನು ಓದುತ್ತಿರುವವರು ಶೇಕಡ 10.2 ಮಂದಿ. ರಾಜಾಸ್ಥಾನದಲ್ಲಿ ಅಕ್ಷರಸ್ಥರ ಸಂಖ್ಯೆ ಕಡಮೆ. ಅಲ್ಲಿ ವೃತ್ತಪತ್ರಿಕೆಗಳನ್ನು ಓದುವವರ ಪ್ರಮಾಣ 4.2ರಷ್ಟು ಮಾತ್ರ. ವೃತ್ತಪತ್ರಿಕೆಗಳ

ಶೈಲಿ ಸಾಮಾನ್ಯ ಓದುಗರ ಮಟ್ಟಕ್ಕೆ ಇರಬೇಕು. ಆ ರೀತಿ ಇದೆಯೇ ಅಥವಾ ಇಲ್ಲವೇ ಎಂಬುದನ್ನು ಸಂಶೋಧನೆಗಳನ್ನು ಮಾಡಿ ಕಂಡುಹಿಡಿಯಲಾಗಿದೆ.

1944ರಲ್ಲಿ ರಾಬರ್ಟ್ ಗನ್ನಿಂಗ್ 5 ವರ್ಷದ ಪ್ರಯೋಗವನ್ನು ಕೈಕೊಂಡನು. ಅದರ ಅಂಗವಾಗಿ 66 ವೃತ್ತಪತ್ರಿಕೆಗಳ ವಾಚನ ಮಟ್ಟವನ್ನು ಕಂಡುಹಿಡಿಯಲು ಪ್ರಯತ್ನ ಪಟ್ಟನು. ಪತ್ರಿಕಾಲಯದಲ್ಲಿ ಕೆಲಸ ಮಾಡುತ್ತಿದ್ದ ಕಾರ್ಯಕರ್ತರಿಗೆ ಬರೆಯುವ ಕಲೆಯ ಬಗ್ಗೆ ತರಬೇತು ನೀಡಿದನು. ಜೊತೆಗೆ ಅವರೊಡನೆ ಆಗಾಗ್ಗೆ ವಿಚಾರ ವಿನಿಮಯ ಮಾಡುತ್ತಿದ್ದನು. ವಾಚನ ಮಟ್ಟವನ್ನು ಸಾಧಿಸಿದ ಬಗ್ಗೆ ಪ್ರತಿ ತಿಂಗಳ ಪ್ರಗತಿಯನ್ನು ಪರಿಶೀಲಿಸುತ್ತಿದ್ದನು.

ವಾಚನ ಮಟ್ಟದ ಬಗ್ಗೆ ಸಲಹೆ ನೀಡಲು ಒಂದು ಸಂಸ್ಥೆಯನ್ನು ಆರಂಭಿಸಿದನು. ಆತನ ಸಲಹೆಯನ್ನು ಉಪಯೋಗಿಸಿಕೊಂಡ ಮೊಟ್ಟ ಮೊದಲ ಪತ್ರಿಕೆ ಕೊಲಂಬಸ್ ಸಿಟಿಜನ್. ಪತ್ರಿಕೆಗಳಲ್ಲಿ ಪ್ರತಿನಿತ್ಯವೂ ಅಚ್ಚಾಗುತ್ತಿದ್ದ ಸುದ್ದಿ ಮತ್ತು ಸಂಪಾದಕೀಯ ಭಾಗಗಳನ್ನು ಸುಮಾರು ಒಂದು ತಿಂಗಳ ಕಾಲ ವಿಶ್ಲೇಷಿಸುತ್ತಿದ್ದನು. ಕಂಡುಬಂದ ನ್ಯೂನತೆಗಳನ್ನು ಸಂಬಂಧಪಟ್ಟ ಪತ್ರಿಕಾಲಯಗಳಿಗೆ ತಿಳಿಸುತ್ತಿದ್ದನು. ಜೊತೆಗೆ ಪತ್ರಿಕಾಲಯದ ಕಾರ್ಯಕರ್ತರನ್ನು ಒಂದೆಡೆ ಸೇರಿಸಿ ಲೇಖನ ಕಲೆಯ ಬಗ್ಗೆ ಭಾಷಣ ಮಾಡುತ್ತಿದ್ದನು.

ಪತ್ರಿಕೆಗಳಲ್ಲಿ ಪ್ರಕಟವಾಗುವ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಸುದ್ದಿಯನ್ನು ಓದುವವರು ವಿರಳ. ಕಾರಣ, ಸುದ್ದಿಯ ನಿರೂಪಣೆ ಬಹಳ ಕಠಿಣವಾಗಿರುವುದು. ಅಮೆರಿಕದಲ್ಲಿ ವೃತ್ತಪತ್ರಿಕಾ ಕ್ಷೇತ್ರದಲ್ಲಿ ಜೇಸಿಕ್‌ವಾಲ್ಟರ್ ಹೆಸರಾಂತ ವ್ಯಕ್ತಿ.

ಪತ್ರಿಕೆ ನಿಲ್ಲುವಂತಹ ಪರಿಸ್ಥಿತಿಯಲ್ಲಿ ಆತನು ಪತ್ರಿಕೆಯ ಸೂತ್ರವನ್ನು ವಹಿಸಿದಲ್ಲಿ ಸದರೀ ಪತ್ರಿಕೆ ಪುನರುಜ್ಜೀವನ ಗೊಳ್ಳುತ್ತಿತ್ತು. ಅಲ್ಲದೆ ಆ ಪತ್ರಿಕೆ ಪ್ರಗತಿಯನ್ನು ಸಾಧಿಸಿ ಹೇರಳವಾದ ಹಣವನ್ನು ಸಂಪಾದಿಸಿಕೊಡುತ್ತಿತ್ತು. ಇದರ ಒಳಗುಟ್ಟೇನು? ಆತನು ಪತ್ರಿಕೆಯ ಭಾಷೆಯನ್ನು ಸುಧಾರಿಸಿ ಓದುಗರ ಮಟ್ಟಕ್ಕೆ ಅನುಗುಣವಾಗಿ ಬರೆಯುತ್ತಿದ್ದನು. ವಿವಿಧ ಇಲಾಖೆಗಳು ಮತ್ತು ತಾಂತ್ರಿಕರು ಕೊಡುವ ವಿಷಯಗಳನ್ನು ಜನಸಾಮಾನ್ಯರಿಗೆ ಅರ್ಥವಾಗುವ ಆಡುವ ಭಾಷೆಯಲ್ಲಿ ಬರೆಸುತ್ತಿದ್ದನು. ಉದಾಹರಣೆಗೆ, ಆರ್ಥಿಕ ಸ್ವಾತಂತ್ರ್ಯ ಎಂದರೆ ಸಾಮಾನ್ಯ ಜನರಿಗೆ ಅರ್ಥವಾಗುವುದೆ? ಅದನ್ನೇ ಜನರು ಆಡುವ ಭಾಷೆಯಲ್ಲಿ ಬರೆದಾಗ ಮಾತ್ರ ಅರ್ಥವಾಗುವುದು. ಈಸ್ಟ್‌ಕೋಸ್ಟ್ ಪತ್ರಿಕೆಯ ಸಂಪಾದಕರು ತಮ್ಮ 6 ಪತ್ರಿಕೆಗಳ ವಾಚನ ಮಟ್ಟವನ್ನು ಗೊತ್ತುಮಾಡಿಸಿದರು. ಪ್ರತಿ ನಾಲ್ಕು ಸಂಪಾದಕೀಯ ಲೇಖನಗಳಲ್ಲಿ 3 ಲೇಖನಗಳು ಕಷ್ಟವಾಗಿರುವುದಾಗಿ ಕೇವಲ ಅರ್ಧ ಗಂಟೆಯ ಸ್ಥೂಲ ವಿಶ್ಲೇಷಣೆಯಿಂದ ಗೊತ್ತಾಯಿತು. ಸಂಪಾದಕೀಯದ ಆಡಂಬರದ ಭಾಷೆ, ಅಲಂಕಾರ ಮತ್ತು ವಿಶ್ಲೇಷಣಗಳು ವಿಷಯದ ಅರ್ಥಗ್ರಹಣೆಗೆ ಅಡ್ಡಿಯನ್ನುಂಟುಮಾಡಿರುವುದಾಗಿ ತಿಳಿಯಿತು.

1935 ರಲ್ಲಿ ಗ್ರೇ ಮತ್ತು ಲೀರಿ 15 ವೃತ್ತಪತ್ರಿಕೆಗಳ ವಾಚನ ಮಟ್ಟವನ್ನು ಪರಿಶೀಲಿಸಿದರು. ಪರಿಶೀಲನೆಗಾಗಿ ನಾಲ್ಕು ಅಂಶಗಳನ್ನು ಗಣನೆಗೆ ತೆಗೆದುಕೊಂಡರು. ಅವುಗಳು ಯಾವುವು ಎಂದರೆ, ಶೇಕಡವಾರು ಅತ್ಯಂತ ಸಣ್ಣ ಪದಗಳು ಅಂದರೆ ಒಂದು ಅಥವಾ ಎರಡು ಅಕ್ಷರಗಳಿಂದ ಕೂಡಿದ ಪದಗಳು, ಬಳಕೆಯಲ್ಲಿ ಇರುವ ಶೇಕಡ ವಿವಿಧ ಪದಗಳು, ಪದಗಳಲ್ಲಿನ ಶೇಕಡ ಅಕ್ಷರಗಳ

(syllables) ಪ್ರಮಾಣ ಹಾಗೂ ವಾಕ್ಯದ ಉದ್ದ, ಶೇಕಡ ಸರಳ ವಾಕ್ಯಗಳ ಪ್ರಮಾಣ–ಇವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪತ್ರಿಕೆಗಳ ವಾಚನ ಮಟ್ಟವನ್ನು ಅಳೆದರು. ಈ ರೀತಿಯ ಪ್ರಯೋಗದಿಂದ ಕಂಡು ಬಂದ ಫಲಿತಾಂಶಕ್ಕೂ ಮತ್ತು ಸಾಮಾನ್ಯ ಓದುಗರ ಅಭಿಪ್ರಾಯಕ್ಕೂ ಹೊಂದಾಣಿಕೆ ಕಂಡುಬಂದಿತು. ದೊಡ್ಡ ದೊಡ್ಡ ವೃತ್ತಪತ್ರಿಕೆಗಳಿಗಿಂತ ಚಿತ್ರದಿಂದ ಕೂಡಿದ ವೃತ್ತಪತ್ರಿಕೆಗಳು ಜನಪ್ರಿಯವಾದವು ಎಂಬುದು ಕಂಡುಬಂದಿತು. ಪತ್ರಿಕೆಗಳ ಸರಳ ಭಾಷೆಗೂ ಮತ್ತು ಅವುಗಳ ಜನಪ್ರಿಯತೆಗೂ ನೇರ ಸಂಬಂಧವಿದೆ ಎಂಬ ಅಂಶ 66 ನಿಯತಕಾಲಿಕ ಪತ್ರಿಕೆಗಳನ್ನು ಮೌಲ್ಯಮಾಪನೆ ಮಾಡಿದಾಗ ಕಂಡುಬಂದಿತು. ಕಠಿಣವಾದ ಭಾಷೆಯಿಂದ ಕೂಡಿದ ವೃತ್ತಪತ್ರಿಕೆಗಳ ಚಂದಾದಾರರ ಸಂಖ್ಯೆ ಕಡಮೆ. ಸಾಮಾನ್ಯ ಮಟ್ಟದ ಭಾಷೆಯನ್ನು ಹೊಂದಿದ್ದ ಪತ್ರಿಕೆಗಳು ಹೆಚ್ಚು ಚಂದಾದಾರರನ್ನು ಹೊಂದಿದ್ದವು. ರಾಜಕೀಯ ಮತ್ತು ಪ್ರಪಂಚದ ಸುದ್ದಿಗಳಲ್ಲಿ ದೊಡ್ಡ ದೊಡ್ಡ ಪದಗಳನ್ನು ಮತ್ತು ಉದ್ದವಾದ ವಾಕ್ಯಗಳನ್ನು ಬಳಸಿರುವುದಾಗಿ ತಿಳಿಯಿತು.

1948ರಲ್ಲಿ ಅಸೋಸಿಯೇಟೆಡ್ ಪ್ರೆಸ್ ರೂಡಾಲ್ಫ್ ಫ್ಲೆಷ್ ಅವರನ್ನು ತನ್ನ ಸಲಹೆಗಾರರನ್ನಾಗಿ ನೇಮಕ ಮಾಡಿಕೊಂಡಿತು. ವಾಚನ ಮಟ್ಟವನ್ನು ಕುದುರಿಸುವ ಬಗ್ಗೆ ಪತ್ರಿಕಾಲಯದ ಕಾರ್ಯಕರ್ತರಿಗೆ ತೀವ್ರವಾದ ತರಬೇತನ್ನು ಎರಡು ವರ್ಷಕಾಲ ಕೊಡಲಾಯಿತು. 'ತರಬೇತಿಗಿಂತ ಮುಂಚೆ ಬಳಸುತ್ತಿದ್ದ ಬರವಣಿಗೆ ಈಗ ಸುಧಾರಿಸಿದೆ' ಎಂಬುದಾಗಿ ಆ ಪತ್ರಿಕೆಯ ನಿರ್ವಾಹಕ ಸಂಪಾದಕರು 2 ವರ್ಷಗಳ ನಂತರ, ಅಂದರೆ, 1950ರಲ್ಲಿ ಅಭಿಪ್ರಾಯಪಟ್ಟರು. ಪತ್ರಿಕೆಯ ಭಾಷೆಯಲ್ಲಿ ಸರಳತೆಯನ್ನು ಸಾಧಿಸುವುದ

ರಲ್ಲಿ ಪ್ರಗತಿಯಾಗಿದೆ ಎಂಬುದಾಗಿ ಫ್ಲೆಷ್ ಅವರ ಅಭಿಪ್ರಾಯ ವಾಗಿತ್ತು. ಉದಾಹರಣೆಗೆ, ತರಪೇತಿಗೆ ಮುಂಚೆ ಪಿಟ್ಸ್‌ಬರ್ಗ್ ಪತ್ರಿಕೆ ಸರಾಸರಿ 9.9 ನೇ ತರಗತಿಯ ವಾಚನ ಮಟ್ಟದಲ್ಲಿತ್ತು. ಒಂದು ವರ್ಷದ ತರಬೇತಿ ನಂತರ ಸರಾಸರಿ 9.1ನೇ ತರಗತಿಯ ವಾಚನ ಮಟ್ಟಕ್ಕೆ ಇಳಿಯಿತು. ಅದೇ ರೀತಿ ಅಕ್ರಾನ್ ಬೀಕನ್ ಪತ್ರಿಕೆಯು ತರಪೇತಿಗೆ ಮುನ್ನ 12.5 ನೇ ತರಗತಿಯ ವಾಚನ ಮಟ್ಟದಲ್ಲಿತ್ತು. ಒಂದು ವರ್ಷದ ನಂತರ 9.0ನೇ ತರಗತಿಯ ವಾಚನ ಮಟ್ಟಕ್ಕೆ ಇಳಿಯಿತು. 1940ರಿಂದ 1950ರ ಅವಧಿಯಲ್ಲಿ ಆ ಪತ್ರಿಕೆಯ ಸಂಪಾದಕೀಯ ಲೇಖನದಲ್ಲಿ ವಾಕ್ಯದ ಸರಾಸರಿ ಉದ್ದ 39ರಿಂದ 32 ಪದಗಳಿಗೆ ಇಳಿಯಿತು. ಈ ಎಲ್ಲ ಪ್ರಯೋಗಗಳು ಒಟ್ಟಿನಲ್ಲಿ ಓದುಗರ ಮೇಲೆ ಯಾವ ರೀತಿ ಪರಿಣಾಮ ಬೀರಿದವು ಎಂಬ ಬಗ್ಗೆ ಯಾವ ಪ್ರಯೋಗಗಳೂ ನಡೆಯಲಿಲ್ಲ. ಆದರೆ ವಾಚನ ಮಟ್ಟದ ಮೌಲ್ಯಮಾಪಕ ಸಂಖ್ಯೆ ಕಡಮೆ ಆದಷ್ಟೂ ಅರ್ಥಗ್ರಹಣ ಉತ್ತಮಗೊಳ್ಳುವುದು ; ಅಲ್ಲದೆ ವಾಚನ ಮಟ್ಟವೂ ಸಹ ಸುಧಾರಿಸುವುದು ಎಂಬ ಅಂಶ ಕೆಲವು ಪ್ರಯೋಗಗಳಿಂದ ಗೊತ್ತಾಯಿತು.

## ಆರೋಗ್ಯ ಮತ್ತು ಕಲ್ಯಾಣ ಮಂಡಳಿ

ಈ ಮಂಡಳಿ ತಯಾರಿಸಿದ್ದ ಶೈಕ್ಷಣಿಕ ವಿಷಯಗಳು ವಿಶ್ಲೇಷಣೆಗೆ ಒಳಗಾದವು. ಈ ಕಾರ್ಯವನ್ನು ರಾಷ್ಟ್ರೀಯ ಕ್ಷಯರೋಗ ಸಂಸ್ಥೆ ಎಡ್ಗರ್ ಡೇಲ್ ಅವರ ನೆರವಿನಿಂದ ಐದು ವರ್ಷಗಳ ಕಾಲ ನಡೆಸಿತು. ಡೇಲ್ ಮತ್ತು ಅವರ ಸಹೋದ್ಯೋಗಿಗಳು 60 ಪ್ರಚಾರ ಪತ್ರಿಕೆ, ಪುಸ್ತಿಕೆಗಳು ಮತ್ತು ಕೈಪಿಡಿಗಳನ್ನು ಪರಿಶೀಲಿಸಿದರು. ಈ

ಕ್ಷೇತ್ರದಲ್ಲಿ ಆಗಲೇ ಪ್ರಚಲಿತವಾಗಿದ್ದ ಪ್ರಚಾರ ಸಾಹಿತ್ಯ ಸಾಮಾನ್ಯ ಓದುಗರ ಮಟ್ಟಕ್ಕೆ ಇದೆಯೆ ಅಥವ ಇಲ್ಲವೇ ಎಂಬುದನ್ನು ಪರಿಶೀಲಿಸಲು ಅವುಗಳನ್ನು ವಯಸ್ಕರ ಮತ್ತು ಮಕ್ಕಳ ಕೈಗೆ ಕೊಟ್ಟು ಓದಿಸಿದರು. ಅವುಗಳು 9ನೆ ತರಗತಿಯ ಮಟ್ಟದಲ್ಲಿದ್ದು, ಸಾಮಾನ್ಯ ಓದುಗರ ಶಕ್ತಿಗೆ ಮೀರಿದ್ದು ಎಂದು ಕಂಡುಹಿಡಿಯಲಾಯಿತು.

ಆದ್ದರಿಂದ ಪ್ರಚಾರ ಸಾಹಿತ್ಯವನ್ನು ಸುಧಾರಿಸಲು ಪ್ರಯತ್ನಪಟ್ಟರು. ಸುಮಾರು 30 ವಿಷಯಗಳನ್ನು 7 ನೇ ತರಗತಿಯ ಮಟ್ಟಕ್ಕೆ ಸುಧಾರಿಸಿ ಬರೆದರು. ಅಲ್ಲದೆ ಅವುಗಳ ವಾಚನ ಮಟ್ಟವನ್ನು ನಿರ್ಧರಿಸಲಾಯಿತು. ಜೊತೆಗೆ ಸಂಬಂಧಪಟ್ಟ ಕ್ಷೇತ್ರದಲ್ಲಿ ಬಳಕೆಯಲ್ಲಿದ್ದ ತಾಂತ್ರಿಕ ಪದಗಳ ಪಟ್ಟಿಯನ್ನು ತಯಾರಿಸಲಾಯಿತು. ಆದರೆ ಕೆಲವು ಅಂಶಗಳನ್ನು ಆ ಸೂತ್ರಗಳ ವ್ಯಾಪ್ತಿಯಲ್ಲಿ ಇದುವರೆಗೆ ಗಣನೆಗೆ ತೆಗೆದುಕೊಳ್ಳಲು ಸಾಧ್ಯವಾಗಿರಲಿಲ್ಲ. ವಿಚಾರದ ಗಾಢತೆ (density of ideas) ತಾಂತ್ರಿಕ ಪದಗಳ ಬಳಕೆ ಮತ್ತು ವಿವರಣೆ, ವಿಷಯಗಳ ಸಂಘಟಣೆ ಮತ್ತು ತಾರ್ಕಿಕ ಸರಣಿ, ನಿರೂಪಣೆ, ವಾಕ್ಯವೃಂದಗಳ ವಿಂಗಡಣೆ ಮತ್ತು ವಿವರಣೆ ಈ ಅಂಶಗಳನ್ನು ಬರವಣಿಗೆಯಲ್ಲಿ ಮೌಲ್ಯಮಾಪನೆ ಮಾಡುವಾಗ ಯಾವ ರೀತಿ ಗಮನಿಸಬೇಕು ಎಂಬುದನ್ನು ನಿರ್ದಿಷ್ಟಪಡಿಸಲಾಯಿತು. ಜೊತೆಗೆ ಈ ಅಂಶಗಳನ್ನು ಕಂಡು ಹಿಡಿಯಲು ಕೆಲವು ಸೂತ್ರಗಳನ್ನು ರಚಿಸಲಾಯಿತು. ಅವುಗಳ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡ ವಿಷಯಗಳನ್ನು ವಿಶ್ಲೇಷಿಸಲಾಯಿತು.

### ಕೈಗಾರಿಕೆ ಮತ್ತು ಸಾರ್ವಜನಿಕ ಸಂಪರ್ಕ

ರಾಬರ್ಟ್‌ಗನ್ನಿಂಗ್ ಮತ್ತು ಜಾನ್ ಮಾಕ್ಲಿರಾಯ್ ಎಂಬು

ವರು ಕೈಗಾರಿಕಾಕ್ಷೇತ್ರಗಳಿಗೂ ವಾಚನ ಸೂತ್ರಗಳನ್ನು ಅನ್ವಯಿಸಿದರು. ಕೈಗಾರಿಕೆ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಲ್ಲಿ ಪ್ರಕಟವಾಗಿದ್ದ ಪ್ರಚಾರ ಪತ್ರಿಕೆಗಳು, ಸೂಚನೆಗಳು, ಆಜ್ಞೆಗಳು, ನಿಯಮಗಳು ಮತ್ತು ವಾರ್ಷಿಕ ವರದಿಗಳನ್ನು ಮೌಲ್ಯಮಾಪನೆ ಮಾಡಿದರು. ಅದರಿಂದ ಒಂದಂಶ ಕಂಡು ಬಂದಿತು. ಈಗಾಗಲೇ ಪ್ರಕಟವಾಗಿದ್ದ ಸಾಹಿತ್ಯ ಭಾವಿ ಓದುಗರ ದೃಷ್ಟಿಯಿಂದ ಬಹಳ ಕಠಿಣ ಎಂಬ ಅಭಿಪ್ರಾಯ ವ್ಯಕ್ತವಾಯಿತು. ಮನಶ್ಶಾಸ್ತ್ರಜ್ಞರು ಸಹ ಕೈಗಾರಿಕಾಕ್ಷೇತ್ರದಲ್ಲಿ ಪ್ರಕಟವಾದ ಸಾಹಿತ್ಯವನ್ನು ವಿಶ್ಲೇಷಿಸಿದರು. ಈ ಬಗ್ಗೆ ಅವರು ತಮ್ಮ ಅಭಿಪ್ರಾಯಗಳನ್ನು ನಿಯತಕಾಲಿಕ ಪತ್ರಿಕೆಗಳಲ್ಲಿ ಆಗಾಗ್ಗೆ ಪ್ರಕಟಿಸಿದರು. ಬುಲೆಟಿನ್, ಹಸ್ತಪತ್ರಿಕೆ ಮತ್ತು ಜಾಹೀರಾತುಗಳನ್ನು ಸಹ ವಿಶ್ಲೇಷಿಸಿದರು. ಅವೆಲ್ಲವೂ ಸಾಮಾನ್ಯ ಕಾರ್ಮಿಕನ ಮಟ್ಟಕ್ಕೆ ಮೀರಿದ್ದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಈ ಕ್ಷೇತ್ರದ ಸಾಹಿತ್ಯ ಪ್ರಕಟಣೆಯ ಕಾರ್ಯದಲ್ಲಿ ನಿರತರಾದವರಿಗೆ ಸಾಹಿತ್ಯ ರಚನಾಲಯಗಳನ್ನು ಮತ್ತು ವಿಚಾರ ಸಂಕಿರಣಗಳನ್ನು ಏರ್ಪಡಿಸಿದರು. ಕೈಗಾರಿಕಾ ಕ್ಷೇತ್ರದಲ್ಲಿ ನಿರತನಾಗಿರುವ ಉನ್ನತ ಅಧಿಕಾರಿ ತನ್ನ ಕ್ಷೇತ್ರದ ಎಲ್ಲಾ ಕೆಲಸಗಳನ್ನು ಮತ್ತು ಸಮಸ್ಯೆಗಳನ್ನು ಅರಿತಿರಬೇಕು. ಸಮಯ ಬಂದಾಗ ಸಂಬಂಧಪಟ್ಟವರಿಗೆ ತಿಳಿಯುವಂತೆ ಸರಳ ಭಾಷೆಯಲ್ಲಿ ಹೇಳಬೇಕು. ಪ್ರತಿನಿತ್ಯವೂ ಆತನ ಮೇಜಿನ ಮೇಲೆ ನೂರಾರು ಕಾಗದ ಪತ್ರಗಳು, ವರದಿಗಳು ಮತ್ತು ಇನ್ನೂ ಅನೇಕವು ಹೊರೆಹೊರೆಯಾಗಿ ಬೀಳುವುವು. ಅವುಗಳನ್ನು ಕೂಲಂಕಷವಾಗಿ ನಿತ್ಯವೂ ಪರಿಶೀಲಿಸುತ್ತಿರಬೇಕು. ಕಚೇರಿಯಲ್ಲಿ ಪ್ರತಿಯೊಬ್ಬ ತಜ್ಞನೂ ತನ್ನದೇ ಆದ

ರೀತಿಯಲ್ಲಿ ಬರೆದಿರುವನು. ಬರವಣಿಗೆಯಲ್ಲಿ ತನ್ನ ಜ್ಞಾನ ಮತ್ತು ಪಾಂಡಿತ್ಯವನ್ನು ಸೂಚಿಸಿರುವನು. ಲೆಖ್ಖದ ಇಲಾಖೆ, ಕಾನೂನು, ವ್ಯಾಪಾರ ಮತ್ತು ಇಂಜಿನಿಯರಿಂಗ್ ಇಲಾಖೆಗಳು ಕೈಗಾರಿಕೆಯ ಕೆಲವು ಪ್ರಧಾನ ಅಂಗಗಳು. ಪ್ರತಿಯೊಂದು ಇಲಾಖೆಯೂ ತನ್ನದೇ ಆದ ರೀತಿಯಲ್ಲಿ ಪ್ರತಿಪಾದನೆಮಾಡಿ ತನ್ನ ಬರವಣಿಗೆಯನ್ನು ಪುಷ್ಟೀಕರಿಸಿಕೊಳ್ಳುವುದು. ಲೆಖ್ಖದ ಇಲಾಖೆ 'ಇದು ಎಂದಿನಂತೆ ನಡೆದಿದೆ' ಎಂದು ಹೇಳಬಹುದು. ಕಾನೂನು ಇಲಾಖೆ ಕರಾರುವಾಕ್ಕಿನ ಅಂಶವನ್ನು ಎತ್ತಿಹಿಡಿಯಬಹುದು. ಅಂತೆಯೇ ಇಂಜಿನಿಯರಿಂಗ್ ಇಲಾಖೆಯೂ ಸಹ. ವ್ಯಾಪಾರದ ಇಲಾಖೆ ತನ್ನ ದೃಷ್ಟಿಯಿಂದ ಅನುಸರಿಸಬೇಕಾಗಿರುವ ಘನತೆ ಮತ್ತು ಔಚಿತ್ಯದ ಪಟ್ಟನ್ನು ಹಿಡಿಯಬಹುದು. ಈ ಎಲ್ಲಾ ಇಲಾಖೆಗಳು ತಮ್ಮದೇ ಆದ ಧಾಟಿಯಲ್ಲಿ ಬರೆದಿರುವುದನ್ನು ನೋಡಲು ಅಧಿಕಾರಿಗೆ ಕಾಲ ಮತ್ತು ಶ್ರಮ ವ್ಯರ್ಥವಾಗುವುದು. ಅಲ್ಲದೆ ಈ ಎಲ್ಲಾ ಅಭಿಪ್ರಾಯಗಳನ್ನು ಸಾಮಾನ್ಯ ಕಾರ್ಮಿಕನ ದೃಷ್ಟಿಯಿಂದ ಅರ್ಥವಾಗುವಂತೆ ಭಟ್ಟಿ ಇಳಿಸುವ ಕಾರ್ಯ ಉನ್ನತ ಅಧಿಕಾರಿಯ ಪಾಲಿಗೆ ಬೀಳುವುದು. ಕಾರಣ, ಯಾರೂ ತಮ್ಮ ಇಲಾಖೆಯ ಬರವಣಿಗೆಯ ಬಿಗಿಯನ್ನು ಬಿಟ್ಟುಕೊಡಲು ಇಷ್ಟಪಡುವುದಿಲ್ಲ. ಅದನ್ನು ಸಡಿಲಗೊಳಿಸಿ ಸರಳಗೊಳಿಸಲು ಸಂಬಂಧಿಸಿದ ಇಲಾಖೆಗಳು ಸುಲಭವಾಗಿ ಒಪ್ಪುವುದಿಲ್ಲ. ಆದ್ದರಿಂದ ಅವುಗಳನ್ನು ಅರ್ಥಮಾಡಿಕೊಳ್ಳಲು ಕಾರ್ಮಿಕನ ಕಾಲವೆಷ್ಟು ಪೋಲಾಗುವುದು? ಕಾಗದವೆಷ್ಟು ವ್ಯಯವಾಗುವುದು? ಸಾಮಾನ್ಯ ಕಾರ್ಮಿಕನಿಗೂ ಮತ್ತು ಕಾರ್ಖಾನೆಯ ಆಡಳಿತ ವರ್ಗಕ್ಕೂ ಮಧ್ಯೆ ಇರುವ ಸಾರ್ವಜನಿಕ ಸಂಪರ್ಕ ಇಲಾಖೆ ಭಾಷೆಗೆ ಸಂಬಂಧಿಸಿದಂತೆ ಇರುವ ಅಂತರವನ್ನು ನಿವಾರಿಸುವ ಕಾರ್ಯವನ್ನು ಕೈಕೊಳ್ಳಬೇಕು.

ಇಲಾಖೆಯಿಂದ ಹೊರಡುವ ಸೂಚನೆಗಳು, ಆಜ್ಞೆಗಳು ಮತ್ತು ಪ್ರಕಟಣೆಗಳು ಮುಂತಾದವು ತಿಳಿವಳಿಕೆ ನೀಡುವ ಮಾಧ್ಯಮಗಳು ಕಾರ್ಮಿಕರ ಮತ್ತು ಸಾರ್ವಜನಿಕರ ದೃಷ್ಟಿಯಿಂದ ಎಷ್ಟರಮಟ್ಟಿಗೆ ಸರಳವಾಗಿರಬೇಕು ಎಂಬುದನ್ನು ತಿಳಿಸಬೇಕು. ಈ ಕಾರ್ಯವನ್ನು ಆಯಾ ಕಾರ್ಖಾನೆಯ ಅಥವಾ ಇಲಾಖೆಯ ಸಾರ್ವಜನಿಕ ಸಂಪರ್ಕ ಇಲಾಖೆ ಕೈಕೊಳ್ಳಬೇಕು. ಕೈಗಾರಿಕಾ ಕ್ಷೇತ್ರದಲ್ಲಿ ನಿರತರಾದ ತಜ್ಞರು ತಮ್ಮ ಜ್ಞಾನಭಂಡಾರವನ್ನು ಭಾವಿ ಓದುಗರ ಸರಳ ಭಾಷೆಯಲ್ಲಿ ಅಳವಡಿಸುವ ಸುಧಾರಣಾ ಕಾರ್ಯಕ್ರಮವನ್ನು ಕೈಕೊಳ್ಳಬೇಕು. ಕೈಗಾರಿಕಾ ವಿಜ್ಞಾನದ ಮುನ್ನಡೆಯ ಕಾರಣ ಹೊಸ ಹೊಸ ವಿಧಾನಗಳು ಹೆಚ್ಚಿನ ಉತ್ಪಾದನೆಗೆ ಕಾರಣವಾಗಿವೆ. ಆದ್ದರಿಂದಲೇ ಸಾಮೂಹಿಕ ಪ್ರಚಾರ ಮಾಧ್ಯಮಗಳ ಹೊಸ ತಂತ್ರಗಳನ್ನು ಬಳಸಿಕೊಂಡು ಸಾರ್ವಜನಿಕರಿಗೆ ಮತ್ತು ಕಾರ್ಮಿಕರಿಗೆ ಕೈಗಾರಿಕೆಯ ಮುನ್ನಡೆಯನ್ನು ಅರಿವು ಮಾಡಿಕೊಡಬೇಕು. ಈ ಸಂದರ್ಭದಲ್ಲಿ ಒಂದು ಮಾತು. 1968ನೇ ನವೆಂಬರಿನಲ್ಲಿ ಬ್ಯಾಂಕಾಕಿನಲ್ಲಿ ಕ್ರಿಯಾತ್ಮಕ ಸಾಕ್ಷರತಾ ಯೋಜನೆಯಲ್ಲಿ ನಿರತರಾಗಿದ್ದ ತಜ್ಞರ ವಿಚಾರ ಸಂಕಿರಣವನ್ನು ಯೂನೆಸ್ಕೊ ಏರ್ಪಡಿಸಿತ್ತು. ಸಂಕಿರಣದಲ್ಲಿ ಕೈಕೊಂಡ ನಿರ್ಧಾರಗಳಲ್ಲಿ ಒಂದನ್ನು ಇಲ್ಲಿ ಪ್ರಸ್ತಾಪಿಸುವುದು ಸಮಯೋಚಿತವಾದುದು. ಇಲಾಖೆಗಳಿಂದ ತಯಾರಾದ ಪ್ರಚಾರಪತ್ರಿಕೆ ಮತ್ತು ಪುಸ್ತಿಕೆಗಳು ಸಾಮಾನ್ಯವಾಗಿ ವಯಸ್ಕ ಓದುಗರ ಮಟ್ಟಕ್ಕೆ ಮೀರಿದವು ಎಂಬ ಅಭಿಪ್ರಾಯವನ್ನು ಸಂಕಿರಣದ ಒಂದು ಗುಂಪು ತಳೆಯಿತು. ಆದ್ದರಿಂದ ಅವುಗಳ ಸುಧಾರಣೆ ಅಗತ್ಯ ಎಂಬುದನ್ನು ಮತ್ತೊಮ್ಮೆ ಒತ್ತಿ ಹೇಳಬೇಕಾಗಿಲ್ಲ.

## ಪರಿಕ್ಷಾ ಪತ್ರಿಕೆ ಮತ್ತು ಪ್ರಶ್ನಾವಳಿಗಳು

ಯಾರಿಗಾಗಿ ಪರಿಕ್ಷಾ ಪತ್ರಿಕೆ ಮತ್ತು ಪ್ರಶ್ನಾವಳಿಗಳು ರಚನೆ ಆಗಿವೆಯೋ ಅವರು ಅವುಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಆಗ ಮಾತ್ರ ಅವರು ಸರಿಯಾದ ಉತ್ತರಗಳನ್ನು ಕೊಡಲು ಸಾಧ್ಯ. ಈ ಬಗ್ಗೆ 1948ರಲ್ಲಿ ಒಂದು ಪ್ರಯೋಗ ನಡೆಯಿತು. ಅದು ಸಾರ್ವಜನಿಕ ಅಭಿಪ್ರಾಯ ಸಂಗ್ರಹಣೆಗಾಗಿ ತಯಾರಿಸಿದ ಪ್ರಶ್ನಾವಳಿಗಳ ವಾಚನ ಮಟ್ಟವನ್ನು ಕಂಡುಹಿಡಿಯುವುದಕ್ಕೆ ಸಂಬಂಧಿಸಿದ್ದು. 144 ಸಾರ್ವಜನಿಕ ಪ್ರಶ್ನಾವಳಿಗಳ ಕಠಿಣತೆಯನ್ನು ಕಂಡುಹಿಡಿಯಲು ಡೇಲ್, ಚಾಲ್ ಮತ್ತು ಫ್ಲೆಷ್ ಸೂತ್ರಗಳನ್ನು ಉಪಯೋಗಿಸಲಾಯಿತು. ಸದರೀ ಪ್ರಶ್ನಾವಳಿಗಳು ಡೇಲ್ ಚಾಲ್ ಸೂತ್ರದ ಪ್ರಕಾರ 7 ಮತ್ತು 8ನೇ ತರಗತಿಯ ಮಟ್ಟದಲ್ಲೂ, ಫ್ಲೆಷ್ ಸೂತ್ರದ ಪ್ರಕಾರ 8 ಮತ್ತು 9ನೇ ತರಗತಿಯ ಮಟ್ಟದಲ್ಲಿ ಇರುವುದಾಗಿಯೂ ಕಂಡುಬಂದಿತು.

1943ರಲ್ಲಿ ರಾಬರ್ಟ್. ಸಿ. ನ್ಯೂಕ್ಲಾಸ್ 315ಸಾರ್ವಜನಿಕ ಪ್ರಶ್ನಾವಳಿಗಳ ವಾಚನ ಮಟ್ಟವನ್ನು ಕಂಡುಹಿಡಿಯಲು ಪ್ರಯತ್ನಪಟ್ಟನು. ವೈಯಕ್ತಿಕ ಸಮಸ್ಯೆಗಳ ಬಗ್ಗೆ ರಚಿಸಿದ್ದ ಪ್ರಶ್ನಾವಳಿಗಳು ಸರಳವಾಗಿದ್ದವು. ಆದರೆ ಸೈನ್ಯವನ್ನು ಕುರಿತು ಕೇಳಿದ ಪ್ರಶ್ನೆಗಳು ಕಠಿಣವಾಗಿದ್ದವು. ಈ ಅಭಿಪ್ರಾಯವನ್ನು ಸಾರ್ವಜನಿಕ ಪ್ರಶ್ನಾವಳಿಗಳನ್ನು ರಚಿಸುತ್ತಿದ್ದ ತಜ್ಞರೇ ಪುಷ್ಟೀಕರಿಸಿದರು.

## ವಯಸ್ಕರ ಶಿಕ್ಷಣಕ್ಷೇತ್ರ

ವಯಸ್ಕರ ಶಿಕ್ಷಣ ಸಾಹಿತ್ಯ ಕ್ಷೇತ್ರದಲ್ಲಿ ರಚಿಸಿದ ಪುಸ್ತಕಗಳ ವಾಚನ ಮಟ್ಟವನ್ನು ಅಳತೆ ಮಾಡುವ ಪ್ರಯತ್ನ 1930ರಲ್ಲಿ

ನಡೆಯಿತು. ಪ್ರಕಟವಾದ ಪುಸ್ತಕಗಳು ವಯಸ್ಕ ಓದುಗರ ಮಟ್ಟಕ್ಕೆ ಮತ್ತು ಅಭಿರುಚಿಗೆ ತಕ್ಕಂತೆ ಇವೆಯೆ ಎಂಬುದನ್ನು ಅಳತೆಮಾಡುವುದೇ ಮುಖ್ಯ ಉದ್ದೇಶವಾಗಿತ್ತು. ಗ್ರೇ ಮತ್ತು ಲೀರಿ ವಯಸ್ಕರಿಗಾಗಿ ರಚಿಸಿದ 350 ಪುಸ್ತಕಗಳ ವಾಚನ ಮಟ್ಟವನ್ನು ಕಂಡುಹಿಡಿದರು. ಸಂಶೋಧನೆಯಿಂದ ಕಂಡುಬಂದ ಮುಖ್ಯಾಂಶಗಳನ್ನು ಕ್ರೋಢೀಕರಿಸಿ ಉಪಾಧ್ಯಾಯರಿಗೂ ಮತ್ತು ಪುಸ್ತಕಭಂಡಾರದ ಅಧಿಕಾರಿಗಳಿಗೂ ಸಹ ಹಂಚಿದರು. ಸಾಮಾನ್ಯವಾಗಿ ಓದುಬರಹ ಕಲಿತಿರುವ ವಯಸ್ಕರಿಗೆ ಪೌರಾಣಿಕ ಕಥೆಗಳು ಪ್ರಿಯವಾಗಿರುವುದಾಗಿ ಕಂಡುಬಂದಿತು. ಇದು ಸಂಶೋಧನೆಯಿಂದ ಕಂಡು ಬಂದ ಅಂಶಗಳಲ್ಲಿ ಮುಖ್ಯವಾದದ್ದು.

ಕೊಲಂಬಿಯ ವಿಶ್ವವಿದ್ಯಾನಿಲಯದ ಉಪಾಧ್ಯಾಯರ ಕಾಲೇಜು 'ಜನತಾ ಪುಸ್ತಕಭಂಡಾರ ಮಾಲೆ'ಯಲ್ಲಿ ವಯಸ್ಕ ಓದುಗರಿಗೆ ಪುಸ್ತಕಗಳನ್ನು ರಚಿಸಿದೆ. ಅವೆಲ್ಲವೂ ಸಾಮಾನ್ಯ ವಯಸ್ಕ ಓದುಗರಿಗೆಮಾತ್ರ. ರಚಿಸಿರುವ ಪುಸ್ತಕಗಳು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಒಳಗೊಂಡಿವೆ. ಹೊಸದಾಗಿ ಆಂಗ್ಲಭಾಷೆಯನ್ನು ಕಲಿಯುವ ವಯಸ್ಕರಿಗೆ 'ಬ್ರೌನ್ ಕುಟುಂಬ ಮಾಲೆ'ಯಲ್ಲಿ ವಿವಿಧ ಹಂತದಲ್ಲಿ ಪುಸ್ತಕಗಳನ್ನು ಪ್ರಕಟಿಸಿರುವರು. ಸೈನಿಕ ಖಾತೆಯಲ್ಲಿ ಕೆಲಸ ಮಾಡುವ ಮಾಧ್ಯಮ ಮಟ್ಟದ ಓದುವ ಶಕ್ತಿಯುಳ್ಳವರಿಗೆ ಸೂಕ್ತ ಪುಸ್ತಕಗಳು ರಚನೆ ಆಗಿರುವುವು.

### ವಾಚನ ಮಟ್ಟದ ಬಗ್ಗೆ ನಡೆದ ಅಧ್ಯಯನಗಳ ಉದ್ದೇಶ

ಬರವಣಿಗೆಯ ವಾಚನ ಮಟ್ಟವನ್ನು ಕಂಡುಹಿಡಿಯಲು ಮೂರು ಕಾರಣಗಳಿವೆ. 1) ಬರವಣಿಗೆಯಲ್ಲಿ ಕ್ಲಿಷ್ಟವಾದ ಮತ್ತು

ಸರಳವಾದ ಅಂಶಗಳನ್ನು ತಿಳಿಯುವುದು. 2) ಈ ಅಂಶಗಳನ್ನು ಅಳೆಯಲು ಖಚಿತವಾದ ಮಾಪಕಗಳನ್ನು ಗೊತ್ತುಮಾಡುವುದು 3) ಬರವಣಿಗೆಯನ್ನು ಸುಧಾರಿಸುವುದು. ವಾಚನ ಮಟ್ಟವನ್ನು ಕಂಡುಹಿಡಿಯಲು ಮೂರು ಘಟ್ಟಗಳಲ್ಲಿ ಸಂಶೋಧನೆಗಳು ನಡೆದಿರುವುವು. ಅವುಗಳನ್ನು ಆಗಲೇ ವಿವರವಾಗಿ ಕೊಟ್ಟಿದೆ. 1922ರಿಂದ 1928ರ ಅವಧಿಯಲ್ಲಿ ನಡೆದ ಸಂಶೋಧನೆಗಳಲ್ಲಿ ಪದಗಳ ಬಗ್ಗೆ ಗಮನ ನೀಡಲಾಯಿತು 1928ರಿಂದ 39ರ ಅವಧಿಯಲ್ಲಿ ವಾಚನ ಶಕ್ತಿಯನ್ನು ನಿರ್ಧರಿಸುವ ಹಲವಾರು ಅಂಶಗಳ ಬಗ್ಗೆ ಗಮನ ಹರಿಯಿತು. ಪದಗಳ ಬಳಕೆಯ ಜೊತೆಗೆ ವಾಕ್ಯಗಳ ರಚನೆ, ವಿಷಯ ನಿರೂಪಣೆ, ಭಾವನಾತ್ಮಕವಾದ ಪದಗಳ ಬಳಕೆ ಮುಂತಾದ ಹಲವಾರು ಬೇರೆ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು. 1938ರಿಂದ 1953ರ ಅವಧಿಯಲ್ಲಿ ವಾಚನಮಟ್ಟವನ್ನು ನಿರ್ಧರಿಸುವ ಕೆಲವು ಅಂಶಗಳನ್ನು ಮಾತ್ರ ಗಮನಕ್ಕೆ ತೆಗೆದುಕೊಳ್ಳಲಾಯಿತು. ಅಂದರೆ ಪದಗಳ ಕ್ಲಿಷ್ಟತೆ ಮತ್ತು ವಾಕ್ಯದ ಉದ್ದ ಈ ಎರಡು ಅಂಶಗಳನ್ನು ಮಾತ್ರ ಗಮನಿಸಲಾಯಿತು.

## ವಾಚನಮಟ್ಟವನ್ನು ನಿರ್ಧರಿಸುವ ನಿಯಮಗಳು

ವಾಚನಮಟ್ಟವನ್ನು ನಿರ್ಧರಿಸಲು ಅನೇಕ ಅಂಶಗಳು ಕಾರಣವಾಗುವುವು. ವಸ್ತು, ಶೈಲಿ, ಪುಸ್ತಕದ ಗಾತ್ರ, ಆಕಾರ ವಿನ್ಯಾಸ ಮತ್ತು ವಿಷಯ ನಿರೂಪಣೆ ಮುಂತಾದ ಅಂಶಗಳು ಪುಸ್ತಕದ ವಾಚನಮಟ್ಟವನ್ನು ನಿರ್ಧರಿಸುವುವು ಎಂಬುದು ಅನೇಕ ಉಪಾಧ್ಯಾಯರ, ಪುಸ್ತಕಭಂಡಾರದ ಅಧಿಕಾರಿಗಳ ಮತ್ತು ಪ್ರಕಟಣಕಾರರ ಅಭಿಪ್ರಾಯ.

ಶೈಲಿಯ ವಿವಿಧ ಅಂಶಗಳು ಪ್ರಯೋಗಕ್ಕೆ ಒಳಗಾಗಿ ಫಲಿತಾಂಶಗಳನ್ನು ನೀಡಿವೆ.

ಪದಸಂಪತ್ತು, ವಾಕ್ಯರಚನೆ, ವಿಚಾರದ ಗಾಢತೆ (density of ideas) ಮತ್ತು ಓದುಗರ ಆಸಕ್ತಿ ಇವುಗಳನ್ನು ಸುಲಭವಾಗಿ ಪರಿಶೀಲಿಸಲು ಸಾಧ್ಯ. ಈ ಅಂಶಗಳನ್ನು ಪ್ರಯೋಗದ ಒರೆಗಲ್ಲಿಗೆ ಸುಲಭವಾಗಿ ಹಚ್ಚಬಹುದು.

ಓದುಗರ ಮೇಲೆ ಪದಗಳ ಬಳಕೆಯ ಪರಿಣಾಮ ಹೆಚ್ಚು ಎಂದು ಕಂಡು ಬಂದಿದೆ. 1) ಪದಗಳ ವೈವಿಧ್ಯತೆ 2) ಪದಗಳ ಕಠಿನತೆ, ಪದಗಳ ವೈವಿಧ್ಯತೆ ಅಂದರೆ ವಿವಿಧ ಪದಗಳ ಬಳಕೆ. ಪದಗಳು ಕಡಮೆ ಇದ್ದಷ್ಟು ವಿಷಯದ ಸರಳತೆ ಹೆಚ್ಚುವುದು. ಸಾಮಾನ್ಯವಾಗಿ ಪದಗಳ ಕಠಿಣತೆಯನ್ನು ಆಯಾ ಪದದ ಉದ್ದ ನೋಡಿ ಹೇಳಬಹುದು. ಅಥವಾ ವೈಜ್ಞಾನಿಕವಾಗಿ ರಚಿಸಿದ ಪದಪಟ್ಟಿಯಲ್ಲಿ ನೋಡಿ ಆಯಾಪದದ ಹಂತವನ್ನು ನಿರ್ಧರಿಸಬಹುದು. ಇಲ್ಲಿ ಇನ್ನೊಂದು ಅಂಶವನ್ನು ಗಮನದಲ್ಲಿಡುವುದು ಒಳ್ಳೆಯದು. ಕೆಲವು ವೇಳೆ ಪದಗಳು ಚಿಕ್ಕದಾದರೂ ಅರ್ಥಮಾಡಿಕೊಳ್ಳಲು ಕಠಿಣವಾಗುವವು. ಸಾಮಾನ್ಯವಾಗಿ ಸಂಸ್ಕೃತ ಜನ್ಯವಾದ ಪದಗಳು ಕ್ಲಿಷ್ಟವಾದವು. ಅಲ್ಲದೆ ಸಂದರ್ಭಾನುಸಾರ ಪದಗಳ ಅರ್ಥವ್ಯಾಪ್ತಿಯು ಬದಲಾವಣೆ ಆಗುವುದು. ಉದಾಹರಣೆಗೆ 'ಆ ಹಳ್ಳಿ ಎರಡು 'ಮೈಲಿ' ದೂರದಲ್ಲಿದೆ.' 'ಮೈಲಿ' ಗುಣ ಆಯಿತು.' ಈ ಎರಡು ವಾಕ್ಯಗಳಲ್ಲೂ 'ಮೈಲಿ' ಎಂಬ ಪದಕ್ಕೆ ಬೇರೆ ಬೇರೆ ಅರ್ಥವಿದೆ. ಕೆಲವು ಪದಗಳು ಕಣ್ಣಿಗೆ ಸ್ಪಷ್ಟ ಚಿತ್ರ ನೀಡುವವು. ಇನ್ನು ಕೆಲವು ಭಾವನಾತ್ಮಕವಾಗಿ ಓದುಗರ ಊಹೆಗೆ ಮಾತ್ರ ಸಿಲುಕುವಂತಹುವು.

ವಾಕ್ಯರಚನೆಗೂ ಮತ್ತು ಅರ್ಥಗ್ರಹಣಕ್ಕೂ ಸಂಬಂಧ ಉಂಟು. ವಾಕ್ಯ ಚಿಕ್ಕದಾದಷ್ಟು ಅದರ ಅರ್ಥ ಬೇಗ ಆಗುವುದು. ವಾಕ್ಯಗಳು ಉದ್ದವಾದಷ್ಟು ಪದಗಳು ಹೆಚ್ಚುವುವು. ಪದಗಳ ಸಂಬಂಧವೂ ಸಹ ಹೆಚ್ಚುವುದು. ಅರ್ಥವ್ಯಾಪ್ತಿ ವಿಶಾಲವಾಗುವುದು. ಒಂದೊಂದು ವಾಕ್ಯವೂ ಸರಪಣಿಯ ಕೊಂಡಿಯಂತೆ. ಕೊಂಡಿಕಿತ್ತ ಸರಪಣಿಯಂತೆ ವಾಕ್ಯಗಳು ಆಗಬಾರದು.

ವಿಷಯದ ಗಾಢತೆ ಅರ್ಥ ಗ್ರಹಣದ ಮೇಲೆ ಪರಿಣಾಮ ಉಂಟುಮಾಡಬಹುದು. ಆದ್ದರಿಂದ ಓದುಗರ ದೃಷ್ಟಿಯಿಂದ ವಿಷಯ ಆದಷ್ಟು ಹಗುರವಾಗಿರುವುದು ಒಳ್ಳೆಯದು. ವ್ಯಾಕರಣ ಭಾಷೆಯ ಜೊತೆಯಲ್ಲೇ ಬೆಳೆದು ಬಂದಿರುವುದು. ಆದ್ದರಿಂದ ವ್ಯಾಕರಣದ ವಿಷಯದಲ್ಲಿ ವಿಶೇಷ ಮಡಿವಂತಿಕೆ ಇರಬಾರದು. ವ್ಯಾಕರಣದ ನಿಯಮಗಳಿಗೆ ಅನುಸಾರವಾಗಿ ಸೃಷ್ಟಿಸಿದ ಪದಗಳ ಹಾವಳಿ ಕಡಮೆ ಇದ್ದಷ್ಟು ವಿಷಯಗ್ರಹಣ ಚೆನ್ನಾಗಿ ಆಗುವುದು. ಸಮ್ಮಿಶ್ರ ವಾಕ್ಯಗಳು ಹೆಚ್ಚಿದಷ್ಟು ವ್ಯಾಕರಣ ಸಿದ್ಧವಾದ ಪದಗಳು ಹೆಚ್ಚುವುವು. ತತ್ಪರಿಣಾಮವಾಗಿ ಗ್ರಹಣಶಕ್ತಿ ಕುಂದುವುದು.

ಓದುಗನ ಆಸಕ್ತಿಯನ್ನು ಕಡೆಗಣಿಸುವಂತಿಲ್ಲ. ಓದುಗನಿಗೆ ಪುಸ್ತಕದ ವಸ್ತುವಿನ ಬಗ್ಗೆ ಆಸಕ್ತಿ ಇದೆಯೆ? ಈ ಅಂಶಗಳನ್ನು ಗೊತ್ತಾದ ಒಂದು ವಾಕ್ಯವೃಂದದಲ್ಲಿ ಬಳಸಿರುವ ಸರ್ವನಾಮ, ನಾಮಪದ, ಸಂಭೋದನಾ ಪದಗಳು ಮತ್ತು ವಾಕ್ಯಗಳು, ಪರಸ್ಪರ ಸಂಭಾಷಣೆಯ ವಾಕ್ಯಗಳು ನಿರ್ಧರಿಸಬಹುದು. ಇವುಗಳ ಪರಿಣಾಮ ವಿಷಯದ ಒಟ್ಟಾರೆ ಅರ್ಥಗ್ರಹಣದಮೇಲೆ ಬಹಳ ಕಡಮೆ. ಪ್ರಧಾನವಾಗಿ ಪದ ಮತ್ತು ವಾಕ್ಯಗಳ ಉದ್ದ ವಾಕ್ಯ ರಚನೆಯ ಸರಳತೆಯನ್ನು ಸೂಚಿಸುವುವು.

## ಮೌಲ್ಯ ಮಾಪನ ವಿಧಾನ

ಇಡೀ ಪುಸ್ತಕದಲ್ಲಿ ಎಲ್ಲಾ ಪುಟಗಳ ವಾಚನಮಟ್ಟವನ್ನು ಅಳೆಯಬೇಕೆ? ಅಥವಾ ಕೆಲವು ಪುಟಗಳನ್ನು ಆಯ್ಕೆ ಮಾಡಿಕೊಂಡರೆ ಸಾಕೆ? ಈ ವಿಷಯದಲ್ಲಿ ವಿವಿಧ ಅಭಿಪ್ರಾಯಗಳಿವೆ. ಇಡೀ ಪುಸ್ತಕದ ಶೇಕಡ 5ರಿಂದ 10 ಭಾಗವನ್ನು ಮೌಲ್ಯ ಮಾಪನೆಗೆ ಒಳಪಡಿಸಬಹುದು. ಆದರೆ 5 ಮಾದರಿಗಳಿಗೆ(samples) ಕಡಮೆ ಇರಕೂಡದು ಎಂಬುದು ಲೋರ್ಜ್ ಅವರ ಅಭಿಪ್ರಾಯ. ಪುಸ್ತಕದ ಪ್ರತಿ ಹತ್ತನೇ ಪುಟದಲ್ಲಿ 100ಪದಗಳ ಮಾದರಿಯನ್ನು ಆರಿಸಿಕೊಳ್ಳಬಹುದೆಂದು ಡೇಲ್ ಮತ್ತು ಚಾಲ್ ಅವರ ಅಭಿಪ್ರಾಯ. ಅಂದರೆ ಪುಸ್ತಕದ ಪ್ರತಿ ಹತ್ತನೇ ಪುಟವನ್ನು ಮೌಲ್ಯಮಾಪನೆಗಾಗಿ ಆರಿಸಿಕೊಳ್ಳಬಹುದು. ಆ ಹತ್ತನೇ ಪುಟದಲ್ಲಿ 100 ಪದಗಳಿಂದ ಕೂಡಿದ ವಾಕ್ಯವೃಂದವನ್ನು ಆರಿಸಿಕೊಳ್ಳಬಹುದು. ಫ್ಲೆಷ್ ಸೂತ್ರದ ಪ್ರಕಾರ ಪುಸ್ತಕದಲ್ಲಿ 25-30 ಮಾದರಿಗಳನ್ನು ಆಯ್ಕೆಮಾಡಿಕೊಳ್ಳಬೇಕು. ಅಂತಹ ಒಂದೊಂದು ಮಾದರಿ 100ಪದಗಳಿಂದ ಕೂಡಿರಬೇಕು. ಅಲ್ಲದೆ ಈ ತರನಾದ ಆಯ್ಕೆ ಇಡೀ ಪುಸ್ತಕದಲ್ಲಿ ಸರಿಯಾಗಿ ಪ್ರಾತಿನಿಧಿಕವಾಗಿರಬೇಕು.

ಪ್ರತಿನಿತ್ಯವೂ ಸಾಮಾನ್ಯವಾಗಿ ವ್ಯವಹಾರದಲ್ಲಿ ನಡೆಯುವುದೇನು? ಒಂದು ಲಾರಿಯ ತುಂಬ ಅಕ್ಕಿಯ ಮೂಟೆಗಳಿವೆ ಎನ್ನೋಣ. ಆಗ ಲಾರಿಯಲ್ಲಿರುವ ಎಲ್ಲಾ ಚೀಲಗಳನ್ನು ಬಿಚ್ಚಿ ಅಕ್ಕಿಯನ್ನು ಪರೀಕ್ಷಿಸುವುದು ಸಾಧ್ಯ ಆಗಲಾರದು. ಜೊತೆಗೆ ಕಾಲ ಮತ್ತು ಶ್ರಮ ವ್ಯರ್ಥವಾಗುವುದು. ಆದ್ದರಿಂದ ಯಾವುದಾದರೂ ಒಂದೆರಡು ಚೀಲಕ್ಕೆ ಸಕ್ಕರೆಗುತ್ತಿ ಹಾಕಿ ಅಕ್ಕಿಯನ್ನು ಪರೀಕ್ಷಿಸುವರು. ಅಂತೆಯೇ ಬೇಯಿಸಲು ಇಟ್ಟ ಅನ್ನದ ಪಾತ್ರೆಯಲ್ಲಿ

ಒಂದೆರಡು ಅನ್ನದ ಅಗಳನ್ನು ಪರೀಕ್ಷಿಸಿ ಅನ್ನ ಬೆಂದಿದೆಯೋ ಅಥವಾ ಇಲ್ಲವೇ ಎಂಬುದನ್ನು ನಿಶ್ಚಯಿಸುವುದು ರೂಢಿಯಲ್ಲಿದೆ. ಪುಸ್ತಕಗಳ ಬಗ್ಗೆಯೂ ಸಹ ಯಾವ ಪೂರ್ವಾಲೋಚನೆಯನ್ನೂ ಮಾಡದೆ ಕೆಲವು ಪುಟಗಳನ್ನು ಆಯ್ಕೆ ಮಾಡಿಕೊಳ್ಳಬಹುದು (random sampling). ಆ ಪುಟಗಳ ವಾಚನ ಶಕ್ತಿಯನ್ನು ಅಳೆಯಬಹುದು. ಉದಾಹರಣೆಗೆ, ಪುಸ್ತಕದ ಪ್ರತಿ ಹತ್ತನೇ ಪುಟವನ್ನು ಮೌಲ್ಯ ಮಾಪನೆ ಮಾಡಲು ಆರಿಸಿಕೊಳ್ಳಬಹುದು. ಆದರೆ ಶಾಲಾ ಪಠ್ಯ ಪುಸ್ತಕಗಳನ್ನು ಮೌಲ್ಯಮಾಪನೆ ಮಾಡುವ ಕ್ರಮವನ್ನು ಬದಲಾಯಿಸಿಕೊಳ್ಳಬಹುದು. ಕಾರಣ, ಸಾಮಾನ್ಯವಾಗಿ ಪ್ರಾಥಮಿಕ ಶಾಲೆಯ ಹಂತದಲ್ಲಿ ತಯಾರಾದ ಪಠ್ಯ ಪುಸ್ತಕಗಳ ಮೊದಲ ಭಾಗದಲ್ಲಿ ವಿಷಯ ಸರಳವಾಗಿರಬಹುದು. ಕಡೆಯಲ್ಲಿ ವಿಷಯ ಕಠಿಣವಾಗಬಹುದು. ಆದ್ದರಿಂದ ಪಠ್ಯಪುಸ್ತಕಗಳಲ್ಲಿ ಮೊದಲನೆಯ ಭಾಗ, ಕಡೆಯ ಭಾಗ ಮತ್ತು ಮಧ್ಯಭಾಗಗಳಲ್ಲಿ ಕೆಲವು ಮಾದರಿ ಪುಟಗಳನ್ನು ಆಯ್ಕೆಮಾಡಿಕೊಂಡು ಅವುಗಳನ್ನು ಪರೀಕ್ಷಿಸಬಹುದು. ಆದರೆ ಪುಟಗಳ ಆಯ್ಕೆ ಇಡೀ ಪುಸ್ತಕಕ್ಕೆ ಪ್ರಾತಿನಿಧಿಕವಾಗಿ ಇರಬೇಕು.

ವಾಚನಮಟ್ಟವನ್ನು ಗೊತ್ತುಮಾಡುವ ಬಗ್ಗೆ ಅಮೆರಿಕದಲ್ಲಿ ಬಹಳ ಸಂಶೋಧನೆಗಳು ನಡೆದಿವೆ. ಅನೇಕ ಮೌಲ್ಯಮಾಪಕಗಳನ್ನು ಕಂಡುಹಿಡಿದಿದ್ದಾರೆ. ಆದರೆ ಈ ವಾಚನದ ಸೂತ್ರಗಳನ್ನು ನಮ್ಮ ಪರಿಸರದ ಇತಿಮಿತಿಯಲ್ಲಿ ಬಳಸುವುದು ಒಳಿತು. ಯಾಂತ್ರಿಕವಾಗಿ ಅವುಗಳನ್ನು ಬಳಸಲಾಗದು. ಹಾಗೆ ಬಳಸಿದಲ್ಲಿ ಕೆಲವು ವೇಳೆ ಒಳ್ಳೆಯ ಪರಿಣಾಮಕ್ಕಿಂತ ಕೆಟ್ಟ ಪರಿಣಾಮ ಆಗಬಹುದು. ಈ ಸೂತ್ರಗಳು ಬರಹಗಾರರಿಗೆ ಕೈ ದೀವಿಗೆಗಳು ಮಾತ್ರವೇ ಹೊರತು

ಅವು ಬರವಣಿಗೆಯನ್ನು ನಿರ್ದೇಶಿಸುವ ಕಾನೂನುಗಳಾಗಲಾರವು ಎಂಬುದಾಗಿ ಡೇಲ್ ಮತ್ತು ಚಾಲ್ ಅಭಿಪ್ರಾಯ ಪಟ್ಟಿರುವರು. ಆದರೆ ಬರವಣಿಗೆಯನ್ನು ಕೈಕೊಳ್ಳುವಾಗ ಈ ಸೂತ್ರಗಳನ್ನು ಗಮನ ದಲ್ಲಿಡುವುದು ಒಳ್ಳೆಯದು. ಬರವಣಿಗೆಯ ಕೈಗಾವಲಿಗಾಗಿ ವೈಜ್ಞಾನಿಕವಾಗಿ ರಚಿತವಾದ ಪದಪಟ್ಟಿಗಳು ಅನೇಕ ಭಾಷೆಗಳಲ್ಲಿವೆ. ಅಂತೆಯೇ ಸೂತ್ರಗಳೂ ಇವೆ. ಓದುಗರ ದೃಷ್ಟಿಯಿಂದ ಬರಹದಲ್ಲಿ ಪರಿಚಿತವಾದ ಪದಗಳು ಇವೆಯೆ? ಓದಲು ವಸ್ತು ಸರಳವಾಗಿ ದೆಯೆ ಅಥವಾ ಇಲ್ಲವೆ? ಎಂಬುದನ್ನು ತಿಳಿಯಲು ಈ ಉಪ ಕರಣಗಳು ಬೇಕು. ಆದರೆ ಈ ಎರಡು ಉಪಕರಣಗಳೇ ಬರಹದ ಮೇಲೆ ಪೂರ್ಣ ಹತೋಟಿಯನ್ನು ಇಟ್ಟುಕೊಂಡಲ್ಲಿ ಕೆಲವು ವೇಳೆ ಬರಹ ಅರ್ಥಶೂನ್ಯವಾಗಬಹುದು. ಊಟ ಹೇಗಿದೆ ಎಂಬ ವಿಷಯ ದಲ್ಲಿ ಊಟಮಾಡಿದವರ ತೀರ್ಪು ಕೊನೆಯದು ತಾನೆ? ಅಂತೆಯೇ ಪುಸ್ತಕಗಳಬಗ್ಗೆ ಓದುಗರದ್ದೂ ಸಹ. ಆದರೆ ಈ ಸೂತ್ರಗಳ ಸಹಾಯದಿಂದ ಪೂರ್ವಭಾವಿಯಾಗಿ ಪ್ರಯೋಗಾಲಯದಲ್ಲಿಯೇ ಪುಸ್ತಕದ ಬೆಲೆ ಕಟ್ಟಬಹುದು. ಬರಹಗಾರರು ಈ ಸೂತ್ರಗಳ ಬಳಕೆಯಿಂದ ಪೂರ್ವಭಾವಿಯಾಗಿ ಪುಸ್ತಕದಬಗ್ಗೆ ಒಂದು ಸೂಥಿಲ ವಾದ ಅಭಿಪ್ರಾಯಕ್ಕೆ ಬರಬಹುದು.

ಪುಸ್ತಕಗಳ ವಾಚನಮಟ್ಟವನ್ನು ನಿರ್ಧರಿಸುವ ಇನ್ನೂ ಕೆಲವು ಅಂಶಗಳಿವೆ. ಪುಸ್ತಕದ ಆಕಾರ, ಗಾತ್ರ, ವಿನ್ಯಾಸ, ಅಚ್ಚಿನಗಾತ್ರ, ಪಂಕ್ತಿಯ ಉದ್ದ, ಸುತ್ತಲೂ ಬಿಟ್ಟಿರುವ ಖಾಲಿಯ ಜಾಗ, ಕಾಗದದ ಬಣ್ಣ, ಮುದ್ರಣ ಮತ್ತು ಚಿತ್ರಗಳು ವಾಚನ ಶಕ್ತಿಯನ್ನು ನಿರ್ಧರಿ ಸುವ ಅಂಶಗಳು. ಮೇಲಾಗಿ ಓದುಗರಿಗೆ ಪುಸ್ತಕವನ್ನು ಓದಲು ಸಹಾಯಕವಾಗುವ ಬೆಳಕನ್ನೂ ಸಹ ಕಡೆಗಣಿಸುವಂತಿಲ್ಲ.

ಭಾರತೀಯ ಭಾಷೆಗಳಲ್ಲಿ ರಚಿತವಾದ ಪುಸ್ತಕಗಳ ವಾಚನ ಮಟ್ಟವನ್ನು ಅಳೆಯುವ ಬಗ್ಗೆ ಯಾವ ಶಾಸ್ತ್ರೀಯವಾದ ಸಂಶೋಧನೆಗಳೂ ನಡೆದಂತೆ ಕಾಣುವುದಿಲ್ಲ. ಆದರೆ ಒಂದು ಪ್ರಯತ್ನ ಮಾತ್ರ ನಡೆದಿದೆ. ಅದೂ ಹಿಂದೀ ಭಾಷೆಯಲ್ಲಿ ಮಾತ್ರ. ಲಕ್ನೊ ಸಾಕ್ಷರತಾ ನಿಕೇತನದವರು ಹೊಸದಾಗಿ ಅಕ್ಷರಸ್ಥರಾದ ವಯಸ್ಕರಿಗೆ ಹಿಂದಿ ಭಾಷೆಯಲ್ಲಿ ರಚಿತವಾದ 400 ಪುಸ್ತಕಗಳ ಮೌಲ್ಯಮಾಪನೆ ಮಾಡಿದರು. ಇದಕ್ಕಾಗಿ ಫ್ಲೆಷ್ ಸೂತ್ರವನ್ನು ಸ್ವಲ್ಪಮಟ್ಟಿಗೆ ಮಾರ್ಪಡಿಸಿ ಪ್ರಯೋಗಿಸಲಾಯಿತು. ಆದರೆ ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ಅಗತ್ಯ. ವಿದೇಶಗಳಲ್ಲಿ ಈ ಬಗ್ಗೆ ನಡೆದಿರುವ ಸಂಶೋಧನೆಗಳನ್ನು ಭಾರತೀಯ ಭಾಷೆಗಳಲ್ಲಿ ಪ್ರಕಟವಾಗುವ ಪುಸ್ತಕಗಳ ಮೌಲ್ಯಮಾಪನೆಗೆ ಎಷ್ಟರಮಟ್ಟಿಗೆ ಉಪಯೋಗಿಸಬಹುದು ಎಂಬ ಬಗ್ಗೆ ದೀರ್ಘವಾಗಿ ಆಲೋಚಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮಲ್ಲೂ ಸಹ ಸಂಶೋಧನೆಗಳು ನಡೆಯಬೇಕಾದ ಅಗತ್ಯವಿದೆ. ಅಂತಹ ವೈಜ್ಞಾನಿಕ ದೃಷ್ಟಿ ಮತ್ತು ಪ್ರಯತ್ನ ಆದಷ್ಟು ಜಾಗ್ರತೆ ಆಗಲಿ. ಹಾಗೆ ಮಾಡದೆಹೋದರೆ, ಪ್ರಯೋಗ ಮಾಡಿ ಸಿದ್ಧೌಷಧವೆಂದು ಸ್ಥಿರಪಡದಿರುವ ಮೂಲಿಕೆಗಳ ಸಹಾಯದಿಂದ ಭಯಂಕರ ರೋಗಗಳನ್ನೂ ಚಿಕಿತ್ಸೆ ಮಾಡಲು ಹೊರಟ ವೈದ್ಯನ ಪ್ರಯತ್ನದಂತೆ ವಯಸ್ಕರ ಸಾಹಿತ್ಯ ರಚನೆಗಳು ವಿಫಲವಾಗುವುವು.

ಆಕರ ಸೂಚಿ


1) The technique of clear writing.
Robert gunning.

2) Readability. Jeanne S. Chall.

3) Literacy and development U N E S C O.
Phillips.

4) The provision of popular reading materials.
U N E S C O

5) An evaluation of reading materials for new literates and study of their reading needs and interests. Mushtaq Ahmed.

6) Work-oriented Functional literacy : reading and follow up materials (Report of a regional work shop). U N E S C O. Bangkok 1969.

7) Survey of reading needs and intersts of adult new literates in Mysore state.
Mysore state adult edn. council.

8) Word-list in Kannada for new literates.
(report of a researeh study) M.S.A.E.C. 1969.

9) Study of the vocabulary of Marathi speaking new literates of the city of Bombay,
Bombay city Social edn. committee. 1959.

10) ಶಿಕ್ಷಣ ತತ್ವ. ಶ್ರೀ. ಟಿ. ವಿ. ತಿಮ್ಮೇಗೌಡ.

11) Adult Education and National Development. V. K. R. V. Rao, Union Minister of Education and youth services. Ministry of Edn. Govt of India New Delhi

12) Report of Functional literacy workshop. organised by U N E S C O at Adis Ababa, Dr. S. N. Saraf.


FULL KNOWLEDGE
SPECIALST CONSULTATION
ACCURATE
NEW IDEAS
BASED ON READER'S
KNOWLEDGE AND
EXPERIENCE
TRUE TO COMMUNITY
BACKGROUND
GOOD ILLUSTRATION
PROPER PRESENTATION
SUBJECT
PRESENTATION
AUTHOR
READERS
STYLE
APPEAL
UNITY
CLARITY
DIRECTNESS
HUMAN APPROACH
FAMILIAR WORDS
SIMPLE SENTENCES
SHORT PARAGRAPHS
LOCAL COLOUR
HUMOUR
DRAMATISATION

ಪುಸ್ತಕ ಹೇಗಿರಬೇಕು